# ಶ್ರೀ ಚೆನ್ನಬಸವಣ್ಣನವರ ಕರಣ ಹಸಿಗೆ

## (ಒಂದು ಅಧ್ಯಯನ)

ಸಂಶೋಧಕರು

**ಶ್ರೀ ರಮೇಶ .ಇ.**

(ಶ್ರೀ ಬಸವರಮಾನಂದ ಮಹಾಸ್ವಾಮೀಜಿ)

ಮಾರ್ಗದರ್ಶಕರು

**ಡಾ|| ಜೆ. ರಾಜಗುಂಡಾಪುರ**

ಎಂ.ಎ., ಪಿ.ಹೆಚ್.ಡಿ., ಪಿ.ಜಿ.ಡಿ.ಎ.ಎಸ್.

ಕನ್ನಡ ಸಹಾಯಕ ಪ್ರಾಧ್ಯಾಪಕರು

ಸರ್ಕಾರಿ ಪ್ರಥಮದರ್ಜೆ ಕಾಲೇಜು, ರಾಮನಗರ.

ಕನ್ನಡ ಸಾಹಿತ್ಯ ಪರಿಷತ್

ಬೆಂಗಳೂರು

ಕನ್ನಡ ವಿಷಯದಲ್ಲಿ ಎಂ.ಫಿಲ್ ಪದವಿಗಾಗಿ

ಕನ್ನಡ ವಿಶ್ವವಿದ್ಯಾನಿಲಯ ಹಂಪೆ

(ಕನ್ನಡ ಸಾಹಿತ್ಯ ಪರಿಷತ್ ಬೆಂಗಳೂರು)

ಸಾದರ ಪಡಿಸಿದ ಮಹಾ ಪ್ರಬಂಧ

೨೦೧೭-೧೮

# ಶ್ರೀ ಚೆನ್ನಬಸವಣ್ಣನವರ ಕರಣ ಹಸಿಗೆ

## (ಒಂದು ಅಧ್ಯಯನ)



ಸಂಶೋಧಕರು

**ಶ್ರೀ ರಮೇಶ .ಇ.**

(ಶ್ರೀ ಬಸವರಮಾನಂದ ಮಹಾಸ್ವಾಮೀಜಿ)

ಮಾರ್ಗದರ್ಶಕರು

**ಡಾ|| ಜೆ. ರಾಜಗುಂಡಾಪುರ**

ಎಂ.ಎ., ಪಿ.ಹೆಚ್.ಡಿ., ಪಿ.ಜಿ.ಡಿ.ಎ.ಎಸ್.

ಕನ್ನಡ ಸಹಾಯಕ ಪ್ರಾಧ್ಯಾಪಕರು

ಸರ್ಕಾರಿ ಪ್ರಥಮದರ್ಜೆ ಕಾಲೇಜು, ರಾಮನಗರ.

ಕನ್ನಡ ಸಾಹಿತ್ಯ ಪರಿಷತ್

ಬೆಂಗಳೂರು

ಕನ್ನಡ ವಿಷಯದಲ್ಲಿ ಎಂ.ಫಿಲ್ ಪದವಿಗಾಗಿ
ಕನ್ನಡ ವಿಶ್ವವಿದ್ಯಾನಿಲಯ ಹಂಪೆ
(ಕನ್ನಡ ಸಾಹಿತ್ಯ ಪರಿಷತ್ ಬೆಂಗಳೂರು)
ಸಾದರ ಪಡಿಸಿದ ಮಹಾ ಪ್ರಬಂಧ

೨೦೧೭-೧೮

ಕರಣ ಹಸಿಗೆ ಕರ್ತೃ



ಚಿನ್ಮಯಿ ಜ್ಞಾನಿ

# ಶ್ರೀ ಚನ್ನಬಸವಣ್ಣನವರು

# ಪ್ರಮಾಣ ಪತ್ರ

ಶ್ರೀ ರಮೇಶ .ಇ. ಇವರು ಬರೆದು ಸಾದರ ಪಡಿಸಿದ "ಶ್ರೀ ಚೆನ್ನಬಸವಣ್ಣನವರ ಕರಣ ಹಸಿಗೆ" ಒಂದು ಅಧ್ಯಯನ ಎಂಬ ಶೀರ್ಷಿಕೆಯ ಎಂ.ಫಿಲ್ ಮಹಾಪ್ರಬಂಧವು ಮೂಲ ಸಂಶೋಧನೆಯ ಅಧ್ಯಯನವಾಗಿದೆ.

ಇವರು ನನ್ನ ಮಾರ್ಗದರ್ಶನದಲ್ಲಿ ಕನ್ನಡ ಸಾಹಿತ್ಯ ಪರಿಷತ್ ಬೆಂಗಳೂರು, ಕನ್ನಡ ವಿಶ್ವವಿದ್ಯಾನಿಲಯ ಹಂಪೆಯಲ್ಲಿ ಸಂಶೋಧನೆ ಕೈಗೊಂಡಿದ್ದಾರೆ. ಪ್ರಸ್ತುತ ಮಹಾಪ್ರಬಂಧವು ಈ ಮೊದಲು ಯಾವುದೇ ಪದವಿಗಾಗಿ ಇಡಿಯಾಗಿ ಇಲ್ಲವೇ ಬಿಡಿಯಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣಿಕರಿಸುತ್ತೇನೆ.

ಮಾರ್ಗದರ್ಶಕರು

ಸ್ಥಳ : ಬೆಂಗಳೂರು

ದಿನಾಂಕ : ೨೮-೦೮-೨೦೧೮

(ಡಾ॥ ರಾಜುಗುಂಡಾಪುರ)

# ದೃಢೀಕರಣ ಪತ್ರ

ಶ್ರೀ ಚೆನ್ನಬಸವಣ್ಣನವರ ಕರಣ ಹಸಿಗೆ ಒಂದು ಅಧ್ಯಯನ ಎಂಬ ಶೀರ್ಷಿಕೆಯ ಮಹಾಪ್ರಬಂಧವು ಡಾ॥ ರಾಜುಗುಂಡಾಪುರ ರವರ ಮಾರ್ಗದರ್ಶನದಲ್ಲಿ ಸಿದ್ದಪಡಿಸಿ, ಎಂ.ಫಿಲ್.ಪದವಿಗಾಗಿ ಕನ್ನಡ ಸಾಹಿತ್ಯ ಪರಿಷತ್ ಬೆಂಗಳೂರು, ಕನ್ನಡ ವಿಶ್ವವಿದ್ಯಾನಿಲಯ ಹಂಪೆಯಲ್ಲಿ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಮಹಾಪ್ರಬಂಧವು ಮೂಲವಾಗಿದ್ದು ಇಡಿಯಾಗಿ ಇಲ್ಲವೇ ಬಿಡಿಯಾಗಿ ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸಂಶೋಧನಾ ವಿದ್ಯಾರ್ಥಿ

ಸ್ಥಳ : ಬೆಂಗಳೂರು

ದಿನಾಂಕ : ೨೮-೦೮-೨೦೧೮

(ಶ್ರೀ ರಮೇಶ .ಇ)

# ಅರಿಕೆ

**ಫಲದೊಳಗಣ ಮಧುರಗೋಪ್ಯದಂತಿದ್ದಿತ್ತು,**
**ಚಂದ್ರಕಾಂತದ ಉದಕದ ತೆರನಂತಿದ್ದಿತ್ತು,**
**ಮಯೂರನ ತತ್ತಿಯ ಚಿತ್ರದಂತಿದ್ದಿತ್ತು,**
**ಶಿಶುಕಂಡ ಕನಸಿನ ಪರಿಯಂತಿದ್ದಿತು,**
**ಕೂಡಲ ಚೆನ್ನಸಂಗಯ್ಯ (ನಿಮ್ಮ–ನಿಲುವು)**
**ಸದ್ಗುರುಚಿತ್ತವ ಪದದಂತಿತ್ತು.**

ಫಲದೊಳಗಣ ಮಧುರವು ಇದ್ದು ಇಲ್ಲದ ಹಾಗೇ ತನ್ನ ಗೌಪ್ಯತೆಯನ್ನು ಕಾಪಾಡಿಕೊಂಡಿದ್ದು, ಅದು ತನ್ನ ಕಾಲ ಚಕ್ರದಲ್ಲಿ ಬಲಿತು ಹದಗೊಂಡು ಮಧುರವು ರುಚಿಸುವ ಪರಿಯನ್ನು ತೃಪ್ತಿಯಲ್ಲಿ ಕಾಣುತ್ತೇವೆ. ಚಂದ್ರಕಾಂತದ ಕಾಂತಿಗೊಂಡು ಉದಕ, ಉದಕಗೊಂಡು ಕಾಂತಿ, ಕಾಂತಿ ಉದಕಗಳಿಂದ ಕ್ರಾಂತಿಯಾಗಿ ತನ್ನ ಪರಿದಿಯನ್ನು, ಇದ್ದು ಇಲ್ಲದ ಹಾಗೇ ಅರಳಿ ಕಮರಿಸಿ ತನ್ನ ಗೌಪ್ಯತೆಯನ್ನು ಶಬ್ಧದೊಳಗಣ ನಿಶಬ್ಧದಂತೆ, ಉಳಿಸಿಕೊಂಡಿರುತ್ತದೆ. ಮಯೂರನ ತತ್ತಿಯು ಸಂಭೋಗದಿಂದ ಉತ್ಪತ್ತಿಯಾಗುವುದಿಲ್ಲ. ನಿಷ್ಕಾಮ ಭಕ್ತಿಯ ಗಂಡು ನವಿಲಿನ ನರ್ತನವು ನರ್ತಿಸಿ ಮೈಮರೆತು ಆನಂದಬಾಷ್ಪದ ನಯನದಿಂದ ಉದುರುವ ಸೃಷ್ಠಿ ಜಲವಂ ಪ್ರೀತಿ ಅಕ್ಕರೆ ಮಮತೆಯಿಂದ ಕಂಠಹಚ್ಚಿ ಮೈಮನ ತುಂಬಿಕೊಂಡು ಸ್ವೀಕರಿಸುವ ಮಯೂರಿ ಆ ಜೀವ ಜಲ ಗರ್ಭವಾಗಿ, ಸೃಷ್ಠಿಗೆ ಕಾರಣವಾಗಿ, ಸಂಭೋಗವಿಲ್ಲದ ತತ್ತಿಯ ಚಿತ್ರ ವಿಸ್ಮಯಗೊಳಿಸಿ ವಿಸ್ಮಯವಾಗುವುದು. ಶಿಶುವಿನ ಬಾವ, ಶುದ್ಧ, ಪರಿಶುದ್ಧ ಮತ್ತು ಹೃದಯ ಶುದ್ಧ, ಶುದ್ಧ ಮನಸಿನ, ಸಿದ್ಧ ಕನಸುಗಳು ಹೊಕ್ಕು ಅಸನಾದಮನಸ್ಸುಗಳಿಗೆ ವ್ಯಸನಗಳ ಚಿಂತೆ ಇಲ್ಲಾ, ಶಿಶುವಿನ ನುಡಿಯು, ನುಡಿಯಾಗದೇ ನುಡಿಭಾವ ತುಂಬಿ ನುಡಿಯದೆ ಮೌನವಗುವುದು, ಮೌನದೇ ಕನಸನ್ನು ಚಿಗುರಿ ಕಕಮರಿಸಿ, ಉಸಿರಿಗೆ ಧ್ವನಿಯಿಲ್ಲದ ಹಾಗೇ ಮಾತಿಲ್ಲದೇ ಶಿಶುವು ಫಲವಿಲ್ಲದೇ ಮರದಂತೆ ತನ್ನ ಕಾಲ ಚಕ್ರವನ್ನು ಕಾಯುತ್ತ ಹದಗೊಳ್ಳಲು ಒಡ್ಡಿಕೊಳ್ಳುತ್ತದೆ. ಆದರೆ ಕನಸು ಕನಸಾಗಿಯೇ ಉಳಿಯುತ್ತದೆಯೇ ಹೊರತು ವಿಕಾಸಗೊಳಿಸುವ ವ್ಯವಹಾರಿಕ ಮಾತು, ಭಾಷೆ ಬಂದಿರುವುದಿಲ್ಲ. ಅದು ಇದ್ದು ಇಲ್ಲದ ಹಾಗೆ ಗೌಪ್ಯವಾಗಿ ಸಾಗುತ್ತದೆ. ಆದರೂ ಕನಸೇ? ಮಾತಿಲ್ಲದ ಮೌನ ಶಿಶುಪಾವಸ್ಥೆ ಅರಳಿದ ಹೂವು ಪೀಚು, ಕಾಯಿ, ಹಣ್ಣು ಹಗಲು ಕಾಲ ಕಾಯುವಂತೆ ಶಿಶುವು ಕಾಯಬೇಕು, ಆ ಕನಸುಗಳಿಗೊಂದು ಶಕ್ತಿಯಿದೆ. ಕೂಡಲ ಸಂಗಯ್ಯನ ನಿಲುವು ನೊರೆಯೊಳಗಣ ತುಪ್ಪದಂತೆ ಉದಕದೊಳಗಣ ಪ್ರತಿಬಿಂಬದಂತೆ, ಸಸಿಯೊಳಗೊಣ ರಸದಂತೆ, ರುಚಿಯಂತೆ, ನೆನೆಯೊಳಗಣ ಪರಿಮಳದಂತೆ, ಉದಕದೊಳಗಣ ಕಿಚ್ಚಿನಂತೆ, ಕನ್ನೆಯೊಳಗಣ ಯೌವ್ವನದಂತೆ, ಇದ್ದು ಇಲ್ಲದ ಹಾಗೇ ಕಾಲ ಚಕ್ರ ಉರುಳಿ ಹದಗೊಳ್ಳದೆವರೆಗೂ ತನ್ನ ಎಲ್ಲಾ ಶಕ್ತಿಯನ್ನು ಹಿಡಿದಿಟ್ಟುಕೊಳ್ಳುವಂತೆ ಸದ್ಗುರುವಿನ ಚಿತ್ತದ ಪದದತ್ತಿಂತ್ತು, ಒಬ್ಬ ಸದ್ಗುರು ಪದವನು ಜೀವ ಜಗತ್ತಿನ ಜನಕನಾದ, ಸೃಷ್ಠಿಕರ್ತನನ್ನು ಪ್ರತಿಯೊಂದು ಜೀವಿಗೂ ಒಂದೊಂದು ರೀತಿಯ ಕೆಲಸ ಕಾರ್ಯಗಳನ್ನು ನಿರ್ವಹಿಸುವಂತೆ ಮಾಡಿದ್ದಾನೆ. ಸದ್ಗುರುಪಾದವನ್ನು (ಆದರ್ಶ ಶಿಕ್ಷಕರಾದವರು) ಭತ್ತಕೆಳ ಸಂಸ್ಕಾರ ಕೊಟ್ಟಾಗ ಅಕ್ಕಿಯಾಗುವಂತೆ, ಅಕ್ಕಿಗೆ ಸಂಸ್ಕಾರ ಕೊಟ್ಟಾಗ ಅನ್ನವಾಗುವಂತೆ, ಅನ್ನಕ್ಕೆ ಸಂಸ್ಕಾರ ಕೊಟ್ಟಾಗ ಪ್ರಸಾದವಾಗುವಂತೆ, ಪ್ರಸಾದವ ಸ್ವೀಕರಿಸಿ ತೃಪ್ತಿ ಹೊಂದುವಂತೆ ಗುರುವು ಶಿಷ್ಯನಿಗೆ ಹಂತ ಹಂತವಾಗಿ ಸಂಸ್ಕಾರ ನೀಡುತ್ತಾ ಓರೆಕೋರೆಗಳನ್ನು ತಿದ್ದುತ್ತಾ, ಶಿಸ್ತು ಬದ್ಧವಾದ

ಜೀವನದ ಶಿಕ್ಷಣ ನೀಡುತ್ತಾರೆ. ತಾಯಿಯ ಗರ್ಭದಿಂದಲೇ ಪ್ರಾರಂಭವಾಗುವ ಶಿಕ್ಷಣ ಪ್ರತಿಯೊಬ್ಬ ಮನುಷ್ಯನ ಬದುಕನ್ನ ಬೆಳಗಿಸಿ ಬೆಳೆಯುವುದು, ಇಂತಹ ಶಿಕ್ಷಣ ಪರಿಸರದಲ್ಲಿ ಬೆಳೆದು ಬಂದ ನಾನು, ಎಂ.ಎ. ಕನ್ನಡ ದ್ವಿತೀಯ ವರ್ಷದ ಪರೀಕ್ಷೆಗಳನ್ನು ಕನ್ನಡ ವಿಶ್ವ ವಿದ್ಯಾನಿಲಯದಲ್ಲಿ ಬರೆಯುವಾಗ, ನನಗೆ ಸಂಶೋಧನೆಯ ಬಗ್ಗೆ ಆಸಕ್ತಿ ಮೂಡಿತ್ತು. ೨೦೧೨-೧೩ ರಲ್ಲಿ ಹೆಸರಾದಂತಹ ವಿಶ್ರಾಂತಿ ಕುಲಪತಿಗಳಾದ ಡಾ॥ ಎಂ.ಎಂ.ಕಲಬುರ್ಗಿಯವರನ್ನು ಧಾರವಾಡದ ಅವರ ಮನೆಯಲ್ಲಿ ಭೇಟಿ ಮಾಡಿದೆ. ನಮ್ಮೊಂದಿಗೆ ವಿರೇಶ್ ಉತ್ತಂಗಿ ಉಪನ್ಯಾಸಕರು ದಾವಣಗೆರೆ ವಿಶ್ವ ವಿದ್ಯಾನಿಲಯ, ಇವರು ನಮ್ಮ ಜೊತೆಯಲ್ಲಿದ್ದರು, ಶ್ರೀಯುತರು ವನಕಲ್ಲು ಮಲ್ಲೇಶ್ವರ ಮಠದ ಬಗ್ಗೆ ಪರಿಚಯ ಮಾಡಿಕೊಟ್ಟು ೨೦೧೪ನೇ ಯ ವರ್ಷದ “ವನಕಲ್ಲು ಶ್ರೀ” ಪ್ರಶಸ್ತಿಯನ್ನು ತಮಗೆ ನೀಡಬೇಕೆಂದು ವ್ಯಕ್ತ ಪಡಿಸಿದೆವು, ಆಗ ಡಾ॥ ಎಂ.ಎಂ. ಕಲಬುರ್ಗಿರವರು ನೀವು ಯಾವುದಾದರೂ ಒಂದು ಸಂಶೋಧನ ಮಾಡ ಬಹುದೆಲ್ಲಾ ಎಂದರು. ಆಗ ನೀವು ಯಾವ ವಿಷಯದ ಬಗ್ಗೆ ಸಂಶೋಧನೆ ಮಾಡಿ ಎಂದು ಹೇಳುತ್ತಿರೋ ಅದರ ಬಗ್ಗೆ ನಾನು ಮಾಡುತ್ತೇನೆ ಎಂದು ಹೇಳಿದೆ. ಅವರು ಪಿ.ಹೆಚ್.ಡಿ. ಮಾಡುವುದಾದರೇ ವಚನ ಸಾಹಿತ್ಯದಲ್ಲಿ ವಿಷಯಗಳನ್ನು ಹುಡುಕುತ್ತೇನೆ. ಎಂ.ಫಿಲ್. ಮಾಡುವುದಾದರೆ, ಕರಣ-ಹಸಿಗೆಯ ಬಗ್ಗೆ ಮಾಡಿದರೆ ಚೆನ್ನಾಗಿ ಇರುತ್ತದೆ ಎಂದು ಮಾರ್ಗದರ್ಶನ ಮಾಡಿದರು. “ವನಕಲ್ಲು ಶ್ರೀ” ಪ್ರಶಸ್ತಿಯನ್ನು ನಾನು ಸ್ವೀಕರಿಸಬೇಕಾದರೆ, ನೀವು ಸಂಶೋಧಕರಾಗಬೇಕು ಎಂದು ನಗು ನಗುತ್ತಾ ವ್ಯಕ್ತಪಡಿಸಿದರು. ಆಗಲಿ ಎಂದು ಒಪ್ಪಿಕೊಂಡು ಬಂದೆ ತದನಂತರ ಒಂದು ವರುಷ ಕಳೆದ ನಂತರ ಕನ್ನಡ ವಿಶ್ವವಿದ್ಯಾನಿಲಯ ಹಂಪೆಗೆ ಬಂದಾಗ ಡಾ॥ರವೀಂದ್ರನಾಥ, ರವರು ಕರಣ-ಹಸಿಗೆಯ ಬಗ್ಗೆ ಎಂ.ಫಿಲ್ ಮಾಡಿ ಎಂದು ಹೇಳಿದರು. ನನಗೆ ಅದರ ಬಗ್ಗೆ ಆಳವಾಗಿ ವಿಚಾರ ಮಾಡಿರಲಿಲ್ಲ. ಎಂ.ಫಿಲ್.ಸಂಶೋಧನೆ ಗುರುಗಳಾದ ಡಾ॥ರಾಜುಗುಂಡಾಪುರ ರವರನ್ನು ಭೇಟಿಮಾಡಿ, ಎರಡು ತಿಂಗಳುಗಳ ಕಾಲ ವಿಷಯಗಳ ಬಗ್ಗೆ ಚರ್ಚಿಸಿ ನಮ್ಮ ಗುರುಗಳಾದ ಡಾ॥ಶಿವಮೂರ್ತಿ ಮುರುಘಾ ಶರಣರ ಅಭಿಪ್ರಾಯ ಸಂಗ್ರಹಿಸಿ ಡಾ॥ಚಿತ್ತಯ್ಯ ಪೂಜಾರ, ಡಾ॥ನಂಜುಂಡಸ್ವಾಮಿ, ಡಾ॥ಪರಶಿವಮೂರ್ತಿ, ಡಾ॥ಪಾಲಾಕ್ಷ ಡಾ॥ ಶಿವನಂದ ವಿರಕ್ತ ಮಠ ಮತ್ತು ಕೆಲವು ಸ್ವಾಮೀಜಿಗಳ ಸಲಹೆ ಮೇರೆಗೆ ಈ ಕರಣ ಹಸಿಗೆಯ ವಿಷಯವನ್ನು ಆಯ್ಕೆ ಮಾಡಿಕೊಂಡೆವು. ನಮ್ಮ ಮಾರ್ಗದರ್ಶಕರಾದ ಡಾ॥ ಜೆ. ರಾಜಗುಂಡಾಪುರ ರವರು ಕರಣ-ಹಸಿಗೆಯ ಬಗ್ಗೆ ತಮ್ಮ ಮನೆಯಲ್ಲಿ ಚರ್ಚೆ ಮಾಡುತ್ತಾ ತುಂಬಾ ಸಲಹೆ ಸೂಚನೆಗಳನ್ನು ನೀಡಿದರು. ಇವರ ಮಾರ್ಗದರ್ಶನದಂತೆ ಒಂದು ಉತ್ತಮ ಸಂಶೋಧನೆ ಮಾಡಲು ಸಾಧ್ಯವಾಯಿತು. ಈ ಎಲ್ಲಾ ವಿಷಯಗಳನ್ನು ಆಗಾಗ್ಗೆ ನಮ್ಮ ಜೊತೆಯಲ್ಲಿ ಚರ್ಚೆ ಮಾಡುತ್ತಾ, ಶಿವರುದ್ರಸ್ವಾಮಿಗಳು ಬೇಲಿಮಠ ಅನ್ನದಾತ ಮಹಾಸ್ವಾಮೀಜಿಯವರು, ಶರಣೆ ಸತ್ಯಕ್ಕ ಬಸವ ಕಲ್ಯಾಣ ಬೆಲ್ದಾಳ್ ಶರಣರು ಕೌಠ, ಚಂದ್ರಶೇಖರಸ್ವಾಮೀಜಿ ಗವಿಮಠ ಬೆಟದ್ದಹಳ್ಳಿ ಯವರ ಜೊತೆಯಲ್ಲಿ ಆಳವಾಗಿ ಚರ್ಚೆಯನ್ನು ಮಾಡುತ್ತಾ ಈ ಕೃತಿಯನ್ನು ವಿಕಾಸ ಗೊಳಿಸಲು ಸಾಧ್ಯವಾಯಿತು. ಈ ಸಂಶೋಧನೆಯ ರಚನೆಗೆ ಸಹಕಾರಿಯಾದ ಮುದ್ದಾಗಿ ಮುದ್ರಿಸಿದ ದೊಡ್ಡೇರಿ ಬೈಲಪ್ಪನವರು, ಆಫೀಸಿನ ಕೆಲಸಗಾರರಾದ ಶ್ರೀಮತಿ ಹೇಮ ಸುರೇಶ್, ಟಿ.ಲಕ್ಷ್ಮೀ ಗೂರಗಟ್ಟಿ ಮತ್ತು ಶ್ರೀ ಪವಾಡ ಬಸವಣ್ಣ ದೇವರ ಮಠದ ಕಂಪ್ಯೂಟರ್ ಆಪರೇಟರಾದ ಕುಮಾರಿ ಶ್ವೇತಾರವರು, ನಮ್ಮ ಕಾರು ಚಾಲಕರಾದ ಶ್ರೀ ಹೆಚ್. ನಟರಾಜ ಇವರಿಗೆ ನನ್ನ ಪ್ರೀತಿಯ, ಕೃತಜ್ಞತೆಗಳನ್ನು ಅರ್ಪಿಸುತ್ತೇನೆ.

– *ಶ್ರೀ ರಮೇಶ್ .ಇ.*

# ಪರಿವಿಡಿ

# ಸಂಕ್ಷಿಪ್ತ ಸೂಚಿ

| | | |
|---|---|---|
| ಹ. ಪ್ರ. | – | ಹಸ್ತ ಪ್ರತಿ |
| ತಾ. ಪ್ರ. | – | ತಾಳೆಗರಿ ಪ್ರತಿ – ತಾಡೋಲೆ ಪ್ರತಿ |
| ಕಾ. ಪ್ರ. | – | ಕಾಗದ ಪ್ರತಿ |
| ಪ್ರ. ಸಂ. | – | ಪ್ರಧಾನ ಸಂಪಾದಕರು |
| ಸಂ. | – | ಸಂಪಾದನೆ |
| ಕ.ವಿ.ವಿ.ಹ. | – | ಕರ್ನಾಟಕ ವಿಶ್ವವಿದ್ಯಾಲಯ, ಹಂಪಿ |
| ಕ.ಸಾ.ಪ.ಬೆ. | – | ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು. |
| ಬೆಂ.ವಿ.ವಿ. | – | ಬೆಂಗಳೂರು ವಿಶ್ವವಿದ್ಯಾನಿಲಯ |
| ಡಾ.ಶಿ.ಮು.ಶ. | – | ಡಾ॥ ಶಿವಮೂರ್ತಿ ಮುರುಘಾ ಶರಣರು |
| ಇ.ಶಿ.ಮ.ಸ್ವಾ | – | ಇಮ್ಮಡಿ ಶಿವಬಸವ ಮಹಾಸ್ವಾಮೀಜಿ |
| ಜ.ಚ.ನಿ. | – | ಜಗದ್ಗುರು ಚಂದ್ರಶೇಖರ ಮಹಾಸ್ವಾಮಿಗಳು, ನಿಡುಮಾಮಿಡಿ |
| ಮ.ನಿ.ಪ್ರ. | – | ಶ್ರೀಮನ್ ನಿರಂಜನ ಪ್ರಣವ ಸ್ವರೂಪಿ |
| ಷ ಭ್ರ | – | ಷಟ್‌ಸ್ಥಲಬ್ರಹ್ಮಿ |
| ॥ ಪ ॥ | – | ಪುಟ |
| ಪು. | – | ಪುಟ |
| ಮು. | – | ಮುದ್ರಣ |
| ಪ್ರ. ಮು. | – | ಪ್ರಥಮ ಮುದ್ರಣ |
| ನಾ. | – | ನಾಲ್ಕನೆ |
| ತೃ. | – | ತೃತೀಯ |
| ಪ್ರಾ. | – | ಪ್ರಾಧಿಕಾರ |
| ಶ. | – | ಶತಮಾನ |
| ಪ್ರಾ. | – | ಪ್ರಾಧಿಕಾರ |
| ಶ. | – | ಶತಮಾನ |
| ಡಾ. | – | ಡಾಕ್ಟರ್ |
| ವ. | – | ವಚನ |

## ಪರಿವಿಡಿ

ಅಧ್ಯಾಯ–೧

# ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ

೧.೧. ಅಧ್ಯಯನದ ಉದ್ದೇಶ

೧.೨. ಅಧ್ಯಯನದ ಸ್ವರೂಪ

೧.೩. ಅಧ್ಯಯನದ ವ್ಯಾಪ್ತಿ

# ೧. ಅಧ್ಯಯನದ ಉದ್ದೇಶ ಸ್ವರೂಪ ವ್ಯಾಪ್ತಿ.

ಪುಣ್ಯಧಾಮವಾಗಿರುವ ಭಾರತದ ಸನಾತನ ಸಂಸ್ಕೃತಿಯ ಧರ್ಮಗಳ ನೆಲದ ಕಣಕಣದಲ್ಲಿಯೂ ಜ್ಞಾನದ ಗಣಿಯೇ ಇರುವುದು,ಕಾಯ.ವಾಚ.ಮನಸಾ. ಇಲ್ಲಿಯ ಜ್ಞಾನ ಬಗೆದಷ್ಟು ಆಳ ಸವೆದಷ್ಟು ರುಚಿ ಹೆಚ್ಚುತ್ತಾ ಹೋಗುವುದು. ಸ್ಥೂಲ.ಸೂಕ್ಷ್ಮ.ಕಾರಣ. ತ್ರಿ ಶರೀರದ. ತ್ರಿಭಾವಗಳ ಶುದ್ಧಿಯಾದ ಈ ಆಧ್ಯಾತ್ಮಿಕ ನೆಲದಲ್ಲಿ ಅನೇಕ ಧರ್ಮಗಳ ಉದಯವಾಗಿದೆ. ಧರ್ಮಗ್ರಂಥಗಳು ಉದಯಿಸಿವೆ. ತತ್ವ ಸಿದ್ಧಾಂತಗಳು ಅವುಗಳ ಸೃಷ್ಟಿಕರ್ತರಾದ ಸಂತರು, ಮಹಾಂತರು. ದಾಶ್ಯನಿಕರು, ಸೂಫಿಗಳು. ಶರಣರು. ಆಧ್ಯಾತ್ಮವಾದಿಗಳು. ಭಕ್ತ ಸಮೂಹ ಮತ್ತು ತತ್ವಜ್ಞಾನಿಗಳು ತಮ್ಮದೇ ಆದ ಛಾಪನ್ನು ಮೂಡಿಸಿದ್ದಾರೆ.ಭಕ್ತಿ.ಜ್ಞಾನ.ಕ್ರಿಯೆಗಳ ಮೂಲಕ ಸುಸಂಸ್ಕೃತಿಯ ಬುನಾದಿ ಹಾಕಿ ಹೋಗಿದ್ದಾರೆ. ಅಂತರ ಶ್ರೇಷ್ಠರು ಪೂಜ್ಯನೀಯರು ಹಾಗೂ ಸ್ವತಂತ್ರರು ಆದ ೧೧-೧೨ನೇಯ ಶತಮಾನದ ಶಿವಶರಣರು ಅಚ್ಚ ಕನ್ನಡದ ಭಾಷೆಯ ಶೈಲಿಯಲ್ಲಿ ಮಾನವ ಜನ್ಮದ ಪಾವನಕ್ಕಾಗಿ ಸಂಪ್ರದಾಯವನ್ನು ಮುರಿದು ಕಟ್ಟಿ.ಸಂಸ್ಕೃತಿಯು ಸಹಜವಾಗಿ ಸಹನೆಯಿಂದ ತೂರ್ಯಾತೀತ ನೆಲೆಗಟ್ಟಿನಲ್ಲಿ ಮೋಕ್ಷಕ್ಕಾಗಿ ಭಕ್ತಿಮಾರ್ಗಕ್ಕಾಗಿ ಸಮಾಜೋದ್ಧಾರ್ಮಿಕ ಸುಧಾರಣೆಯ ಮಾತುಗಳನ್ನು.ವಚನವೆಂದು ಕರೆದರು. ಶಿವಯೋಗ ಸಾಧನೆಗಾಗಿ ಮಾನವ ದೇವಮಾನವನಾಗಲು,ಮಾಂಸಪಿಂಡ.ಮಂತ್ರಪಿಂಡವಾಗಲು ಶಿವಯೋಗಿ ಸಂಗಿಯಾಗಲು ತತ್ವಸಿದ್ಧಾಂತವನ್ನು ರಚಿಸಿರುವರು.

೧೧-೧೨ನೇಯ (೧೧-೧೨)ಶತಮಾನದಲ್ಲಿ ಚೆನ್ನಬಸವಣ್ಣನವರು ರಚಿಸಿರುವ ಕರಣಹಸಿಗೆಯನ್ನು ಅಧ್ಯಯನ ಮಾಡಿದಾಗ ಇದು ಯಾವುದೇ ಮತಕ್ಕೆ ಸಂಬಂಧಿಸಿದ ಧರ್ಮಗ್ರಂಥದಲ್ಲ.ವೀರಶೈವರು.ಲಿಂಗಾಯಿತರು.ಮಠಾಧಿಪತಿಗಳು.ಸ್ವಾಮಿಗಳು,ಸಂತರು,

ಧರ್ಮನಿಷ್ಟರು ಇಂತವರಷ್ಟೆ ತಿಳಿಯಬೇಕೆಂದಿಲ್ಲ. ಜನಸಾಮಾನ್ಯರು.ಪಾಮರರೂ. ಪ್ರತಿಯೊಬ್ಬ ಸಾರ್ವರ್ತಿಕವಾದ ಮಾನವಕುಲ ಅವಲೋಕಿಸುವ ಶ್ರೇಷ್ಟ ಕೃತಿ.ಇದರಲ್ಲಿ ಧರ್ಮಸಿದ್ಧಾಂತಗಳಾಗಲಿ ದೈತ,ಅದ್ವೈತ,ಕುರಿತಾದ ವಿಷಯಗಳಲ್ಲಿ ಜಾತಿ ಮಥ ಪಂಥಗಳ ಬೇದಗಳಿಲ್ಲ. ಬಡವ ಬಲ್ಲಿದ ಶೀಮಂತರೆಂಬ ಬೇದಗಳಿಲ್ಲ. ಜ್ಞಾನಿ ಅಜ್ಞಾನಿಗಳ ಬೇದವಿಲ್ಲ,ಆದರೆ ಅನುಭಾವಿಗಳು ಯಾರಾರು ಆಗಿರಲಿ ಆತ್ಮ ಶರೀರದ ರಚನೆಯ ಜ್ಞಾನ ಇದರಲ್ಲಿದೆ, ಇಂದಿನ ವೈದ್ಯರಿಗೆ ಕೈಗನ್ನಡಿಯ ರೂಪದ ಕೃತಿಯಿದು. ಪ್ರತಿಯೊಬ್ಬ ವೈದ್ಯನು ಅವಲೋಚಿಸಿ,ಅರ್ಥೈಸಿಕೊಂಡು ಅಳವಡಿಸಿಕೊಳ್ಳಬೇಕಾದ ವಿಷಯ ಇದರಲ್ಲಿದೆ. ಸಾಧಕನಾಗಬೇಕಾದವನು ಮೊದಲು ಈ ಕೃತಿಯನ್ನು ಅಧ್ಯಯನ ಮಾಡಿಕೊಂಡು ದೇಹಾತ್ಮವನ್ನು ಸರಿಯಾಗಿ ಇಟ್ಟುಕೊಂಡು ಸಾಧನೆ ಮಾಡಲು ಸಾಧ್ಯವಿದೆ. ಡಾಟಟ. ಇಮ್ಮಡಿ ಶಿವಬಸವಸ್ವಾಮಿಗಳು ಹೇಳುವಂತೆ ಇದು ಮತಿಯ ಕೃತಿಯಲ್ಲ, ವಾದ ವಿವಾದಗಳ ಕೃತಿಯಲ್ಲ, ಮತ ಸಿದ್ಧಾಂತದ ಸ್ಥಾಪನ ಕೃತಿಯಲ್ಲ ಇಲ್ಲಿ ದ್ವೈತ ಅದ್ವೈತಗಳ ಚರ್ಚೆಯಲ್ಲಿ ಸರ್ವರಿಗೂ ಅನ್ವಯವಾಗುವ ತಾತ್ವಿಕ ಕೃತಿ ಯಾವುದೆ ಜಾತಿ ಮತ ಪಂಥಗಳಿಗೆ ಮೀಸಲಾದುದ್ದಲ್ಲ ಸರ್ವರಿಗೂ ಸರ್ವೋದಯದ ಜ್ಞಾನದ ಬೆಳಕು ಆಕಾಶ ದೀಪ ಸರ್ವರಿಗೂ ಸರ್ವಕಾಲಕ್ಕೂ ನೀಡುವ ತಾತ್ವಿಕ ತಳಹದಿಯ ಮೇಲೆ ಹುಟ್ಟಿದ ಕೃತಿ ಇದಾಗಿದೆ. ನಮ್ಮನ್ನು ನಾವು ತಿಳಿದು ಜೀವಿಸುವ ಆರೋಗ್ಯದಾಯಕ ವಿಷಯವನ್ನು ಒಳಗೊಂಡ ವೇದ, ಉಪನಿಷತ್ತು, ಆಗಮ, ತಂತ್ರಯೋಗ,

ಪುರಾಣ, ಆಂದಿನ ಶರೀರ ಶಾಸ್ತ್ರ, ಜ್ಞಾನಶಾಸ್ತ್ರ, ವೈದ್ಯಶಾಸ್ತ್ರ, ವೈದ್ಯ ಪದ್ಧತಿಗಳನ್ನು ಚೆನ್ನಬಸವಣ್ಣನವರು ಆಳವಾಗಿ ಅಧ್ಯಯನ ಮಾಡಿ ತಮ್ಮ ಅನುಭವ ಜ್ಞಾನದ ಮೂಲಕ ಈ

ಕೃತಿಯನ್ನು ಅಭಿವ್ಯಕ್ತಗೊಳಿಸಿದ್ದಾರೆ. ಕರಣಹಸಿಗೆ ಎರಡು ಪದಗಳಿಂದ ಕೂಡಿದ್ದುದು ಕರಣ+ಹಸಿಗೆ."ಕರಣ"ಎಂದರೆ ತತ್ವಗಳು, "ಹಸಿಗೆ"ಎಂದರೆ ವಿಭಾಗಕ್ರಮ, ಕರಣಹಸಿಗೆಯನ್ನು ರಚಿಸಿದವರು "ಚಿನ್ಮಯಿಜ್ಞಾನಿ", ಕರತಲದ ಮಣಿ ಮುಖೋರ. ಜ್ಞಾನನಿಧಿ ನಕ್ಷತ್ರನಾದ ಲಿಂಗಾಯಿತ ಧರ್ಮಕ್ಕೆ ತಾತ್ವಿಕ ಚೌಕಟ್ಟನ್ನು ಕೊಟ್ಟ ಷಟುಸ್ಥಲ ಜ್ಞಾನಿ ಚೆನ್ನಬಸವಣ್ಣ. ಕರಣ ಹಸಿಗೆಯಲ್ಲಿ ನಿರೂಪಿತವಾಗಿರುವ ವಿಷಯಗಳನ್ನು ಒಟ್ಟಾರೆ ಅಭಿನಿವೇಶನವಿಲ್ಲದೆ ಪರೀಶಿಲಿಸಿದ್ದಲ್ಲಿ ಅದು ವೀರಶೈವ ಅಥವಾ ಲಿಂಗಾಯುತರಿಗೆ ಮೀಸಲಾದ ಕೃತಿ ಎನಿಸುವುದಿಲ್ಲ. ಲಿಂಗಾಯುತ ಧರ್ಮದ ಪರಿಕಲ್ಪನೆಗಳಾದ ಅಷ್ಟವರುಣ,ಪಂಚಚಾರ,ಷಟುಸ್ಥಲ, ಪ್ರಸ್ತಾಪವೇ ಮೂಲ ಪಠ್ಯದಲ್ಲಿಲ್ಲ. ಇದು ಗಮನಿಸಬೇಕಾದ ಸಂಗತಿ.ಶ್ರೀ ಡಾ.. ಇಮ್ಮಡಿ ಶಿವಬಸವ ಸ್ವಾಮಿಗಳು ತಮ್ಮ ವ್ಯಾಖ್ಯಾನ ಕೃತಿಯಲ್ಲಿ ಹೇಳಿರುವುದು ಒಪ್ಪುವಂತಿದೆ. ಡಾ..ಎಸ್‌ವಿದ್ಯಾಶಂಕರ ರವರು ರಚಿಸಿರುವ "ವೀರಶೈವ ಸಾಹಿತ್ಯ ಚರಿತ್ರೆ" ಸಂಪುಟ ೩ ರಲ್ಲಿ ಅಭಿವ್ಯಕ್ತಗೊಂಡಿದೆ. ಹಾಗೂ ಡಾ.. ಫ.ಗು. ಹಳಕಟ್ಟಿರವರು ಸಂಪಾದಿಸಿದ ವಚನಶಾಸ್ತ್ರಸಾರ ಭಾಗ–೨ರಲ್ಲಿ ಚನ್ನಬಸವಣ್ಣನವರ ಕರಣ ಹಸಿಗೆ ಅರ್ಥ ಹೀಗಿರುವುದು. ಕರಣ ಹಸಿಗೆ ಎಂಬ ಪ್ರಕರಣವು ಈ ಶಾಸ್ತ್ರಕ್ಕೆ ತತ್ವಗಳ ಸಂಗ್ರಹ ವಿಭಾಗದ ವಿವರಣೆ ಎಂಬಸಾಮವು ಏನು ಕಾರಣ ಬಂದಿತಲೇ ಸಾಮಿ?. ಬೇಸರಗೊಂಡದೆ. "ಕರುಣ"ಎಂದೆಡೆ "ತತ್ವಗಳು," " ಹಸಿಗೆ"ಎಂದೆಡೆ "ವಿಭಾಗಗಳು" ಅದು ಹೇಗೆಂದೊಡೆ ಒಬ್ಬನೊಬ್ಬ ರೈತನು(ಹಲಯುದನು) ಮಳೆಯ ಹದದಿ ಭೂಮಿಯ ಬೆದೆಯನರಿದು ಎತ್ತುಕಟ್ಟ ಕುಂಟೆ,ಕೂರಿಗೆ,ನೋಗ,ನೇಗಿಲು,ಮೀಣಿ,ಬಾರಿಕೋಲು ಮುಂತಾದವುಗಳನ್ನು ತೆಗೆದುಕೊಂಡು ಹೋಗಿ ಹೂಡಿ ಹೊಡೆದು ಅರಗಿ ಹಸನುಮಾಡಿ ೧೮ ಧಾನ್ಯಗಳನ್ನು ಭಿತ್ತಿ ಕಳೆಮೆಳೆಯಂ ತೆಗೆದು ಸುರಕ್ಷಿತವಾಗಿ ಸಲಹಿ ಫಲ ಪೂರಿತವಾದ ಬಳಿಕ ಲವಿತ್ರದ ತೆಗೆದುಕೊಂಡು ಛೇದಸಿಕಂತೆಯಂ ಕಟ್ಟಿ ಬಣವೆಯನ್ನೊಡ್ಡಿ ಕಣವಮಾಡಿ ಮೇಟಿಯ(ನೆಟ್ಟು) ವಡ್ಡವನ್ನು ಹಾಕಿ ತುಳಸಿಹಸನು ಮಾಡಿ ಒಕ್ಕ ತೂರಿ ರಾಶಿಯನ್ನು ಮಾಡಿದ ಬಳಿಕ ಹಸ್ತದಲ್ಲಿ ಕೊಳಗವ (ಶೇರು) ತೆಗೆದುಕೊಂಡು ಅಳೆವಲ್ಲಿ ನೆಲ್ಲಿಷ್ಟವಾಗಿತ್ತು, ರಾಗಿಇಷ್ಟಾಗಿತ್ತು, ಗೋಧಿಇಷ್ಟಾಗಿತ್ತು, ಕಡಲೆಇಷ್ಟಾಗಿತ್ತು, ಅವರೆ, ತೋಗರಿ, ಹುರುಳಿ, ನವಧಾನ್ಯಗಳು ಅಥವ ವಿವಿಧ ಧಾನ್ಯಗಳಲ್ಲಿ ಇಷ್ಟಾದವೆಂದು ಅಳೆದಳೆದು. ಹಸಿಗೆಯಂ ಮಾಡುವ ಹಾಗೆ ಇಂತಿ ಬ್ರಹಾಂಡವೆಂಬ ಕ್ಷೇತ್ರಾಧಿಪತಿಯಪ್ಪ. ಪರಶಿವನೆಂಬ ಆಲಾಯುಧನು ಆದಿಯಲಿ ತನ್ನ ಪಂಚಮುಖಗಳಿಂದ ಪಂಚಭೂತಗಳಂ ಪುಟ್ಟಿಸಿ ಆ ಪಂಚಭೂತಗಳ ತಾರತಮ್ಯದಿಂದ ೨೫ ತತ್ವಗಳಂ ಪುಟ್ಟಿಸಿ ಆ ೨೫ ತತ್ವಯುಕ್ತವಾದ ಶರೀರವನ್ನು ತಮ್ಮ ಗೌಪ್ಯಮುಖದಲ್ಲಿ ಆತ್ಮನಂ ಪುಟ್ಟಿಸಿ ಆ ಆತ್ಮನಿಗೆ ಸಂಬಂಧವಂ ಮಾಡಿಕೊಳ್ಳಲು ಆ ಆತ್ಮನು ಅದೇ ಅಹಂಬಾವಮರವೇ ಇದಂ ತನ್ನ ನಿಜವಂ ಮರೆದು ಅಜ್ಞಾನಿಯಾಗಿ ಅನೇಕ ಜನ್ಮಗಳಲ್ಲಿ ಹುಟ್ಟಿ ಹುಟ್ಟಿ ಬರುವಲ್ಲಿ ಅಕ್ಕಮಹಾದೇವಿ ಹೇಳುವಂತೆ ಭವ ಬಂಧನ ಭವಪಾಶವಾದ ಕಾರಣವೇನಯ್ಯ ಇಂದಿನ ಜನುಮದಲ್ಲಿ ಗುರು ಲಿಂಗ ಜಂಗಮ ಪೂಜಿಸಿಲರಿಯದ ಕಾರಣಕ್ಕಾ ಬಹು ಜನ್ಮಕ್ಕಾ ತಂದಿಕ್ಕದಯ್ಯ ಆ ನಿಲುವು ಈ ಕರಣ ಹಸಿಗೆಯಲ್ಲಿ ವ್ಯಾಪಿಸಿಕೊಂಡಿದೆ,

ಈ ಉಕ್ತಿಯನ್ನು ವೀರಶೈವ ಲಘು ಸಾಹಿತ್ಯ ಪ್ರಕಾರಗಳು ಎಂಬ ಸಂಶೋಧನ ಕೃತಿಯನ್ನು ಶ್ರೀ ಆರ್.ವಿ. ಪಾಟೀಲರವರು ಸಂಶೋಧಿಸಿರುವ ಅಪ್ರಕಟಿತ ಕೃತಿಯಿಂದ ತೆಗೆದುಕೊಳ್ಳಲಾಗಿದೆ.

ಪಂಚಭೂತ ಉತ್ಪತ್ತಿಯಲ್ಲಿಯ ಶ್ಲೋಕಗಳು ವಾತುಲಾಗಮ,ವಿರಾಗಮನಗಳಿಂದ ತೆಗೆದುಕೊಳ್ಳಲಾಗಿದೆ . ಎಂದು ಅನಾದಿ ವೀರಶೈವ ಸಂಗ್ರಹ ಹಾಗೂ ವೀರಶೈವ ತತ್ವ ಮತ್ತು ಆಚರಣೆ ಎಂಬ ಗ್ರಂಥಗಳ ಆಧಾರದಿಂದ ಸಮರ್ಥಿಸಬಹುದು ಎಂದು ಹಿಮ್ಮಡಿಶಿವಬಸವ ಸ್ವಾಮಿಗಳು ಸಮರ್ಥಸಿಕೊಂಡಿದ್ದಾರೆ. ಅವು ಸಮರ್ಥನಿಯವು ಹಾಗಿವೆ. ಅಂಗಚತುಷ್ಟಯಗಳು. ವಿವರಗಳಾಗಿ ಸಂವಾದಿಯಾಗಿರುವಂತಹ ಶ್ಲೋಕವು ವಾತುಲಾಗಮದಿಂದ ಬಂದಿದೆ ಎಂದಿದ್ದಾರೆ. ಹೀಗೆ ಚೆನ್ನಬಸವಣ್ಣನವರಿಗೆ ಪ್ರೇರಕವಾಗಿ ವೇದ ಆಗಮ ಉಪನಿಷತ್ತುಗಳು ಸಹಾಯಕ

ಆಕಾರಗಳಾಗಿವೆ. ಇದಕ್ಕೆ ಅದರಿಂದಲೇ ಕಾಲತೀತವಾದ ವೈಜ್ಞಾನೀಕ ಸತ್ಯವನ್ನು ತಿಳಿಸುವ ಮಾನವನ ಇಡೀ ಶರೀರದ ಆತ್ಮದ ಅರಿವನ್ನು ಮೂಡಿಸಿ ಅಮೃತ ತತ್ವವನ್ನು ಉಣಬಡಿಸುತ್ತಾ ಆಧ್ಯಾತ್ಮ ತತ್ವದತ್ತ ಸರಳವಾಗಿ ಕರೆದಯ್ಯುವ ಶಿವಗ್ರಂಥ ಇದಾಗಿದೆ. ಪ್ರತಿಯೊಬ್ಬ ಮನುಷ್ಯಜೀವಿಯು ಅವಶ್ಯಕವಾಗಿ ಗಮನಿಸಲೇಬೇಕಾದುದ್ದಾಗಿದೆ. ನಮ್ಮ ವಿಶ್ವವಿದ್ಯಾಲಯಗಳು ಈ ಕೃತಿಯನ್ನು ಅವಶ್ಯಕವಾಗಿ ವಿದ್ಯಾರ್ಥಿಗಳು ಓದುವಂತೆ ಅವಕಾಶ ಮಾಡಬೇಕು ಇದರ ಅಧ್ಯಯನದಿಂದ ಇಂದಿನ ನಾಗಲೋಕದ ಕಲ್ಪನ ಲಹರಿಯ ಬದುಕು ಶಾಂತ ಪೂಜಿಸಿಲರಿವಾಗಿ ದೇವಮಾಯವಾಗಿ ಸಾಗಲು ಪೂರಕವಾಗುವುದು. ಒಟ್ಟಾರೆ ಕರಣ ಹಸಿಗೆಯಲ್ಲಿ ಚನ್ನಬಸವಣ್ಣನವರು ಸುಮಾರು ಒಂದು ಸಾವಿರ ವರ್ಷಗಳ ಹಿಂದೆಯೇ ವೈದ್ಯ ವಿಜ್ಞಾನಿಗಳು ಬೆರಗಾಗುವ ರೀತಿಯಲ್ಲಿ ರಹಸ್ಯಮಯವಾಗಿ ವಿಜ್ಞಾನಕ್ಕೆ ನಿಲುಕದ ದೇಹ ರಚನಾ ಆತ್ಮರಹಸ್ಯ ಕ್ರಿಯಾಕ್ರಮಗಳನ್ನು ಇದರಲ್ಲಿ ವಿವರಿಸಿದ್ದಾರೆ. ಪಾರಮಾರ್ಥಿಕ ತತ್ವಗಳ ಮೂಲಕ ಜಾಲ

ಜಾಲವಾಗಿ ವಿವರಿಸಿ ನಿರೂಪಿಸಿರುವರು. ಇದರ ಅಧ್ಯಯನದಿಂದ ದೇಹಜ್ಞಾನ. ಆತ್ಮಜ್ಞಾನ ಪಡೆದ ಹೇಗೆ ಸಾರ್ಥಕ ಪಡಿಸಿಕೋಳ್ಳಬೇಕೇಂದು ತಿಳಿಯುವುದು. ಈ ಕರಣ ಹಸಿಗೆ ಹಾಗೂ ದೇಹಾತ್ಮವಿಜ್ಞಾನದಲ್ಲಿ ಕರಣ ಎಂದರೆ ತತ್ವಗಳು ಹಸಿಗೆ ಎಂದರೆ ವಿಭಾಗವೆಂದು ತತ್ವಗಳಿಂದಾದ ದೇಹವನ್ನು ವಿಭಾಗಿಸಿ ವಿವರಿಸುವುದು ಓಂಕಾರ ಪ್ರಣವದಿಂದ ಎಂದು ಹೇಳಿ ಇದನ್ನು ಎಲ್ಲರು ಓದಿ ತಿಳಿದುಕೊಳ್ಳಬೇಕು. ಆತ್ಮದೇಹ ಶುದ್ದಿಕರಿಸಿಕೊಂಡು ಬದುಕುವುದರಿಂದ ಶುದ್ದ ಜೀವನ ಸಹಬಾಳ್ವೆ ಸಾಧ್ಯವಾಗುವುದು. ಇಲ್ಲಿ ತಿಳಿಸಿರುವ ಎಲ್ಲಾವಿಚಾರಗಳು ಇಂದಿನ ವಿಜ್ಞಾನ ಎಲ್ಲರಿಗೂ ಒಳಿತಾದವುಗಳೆ ಆಗಿವೆ. ಅವುಗಳನ್ನು ಸರ್ವಒಳಿತಿಗಾಗಿ ಅಷ್ಟೆ ಬಳಸಿಕೊಳ್ಳಬೇಕು. ಇದರಲ್ಲಿರುವ ಎಲ್ಲಾಮಾಹಿತಿಯನ್ನು ಆಸ್ಪತ್ರೆಯ ಗೋಡೆಯಲ್ಲಿ ನೇತು ಹಾಕಬೇಕು. ಅಣದರೆ ಇದರ ಜ್ಞಾನ ಎಲ್ಲರಿಗೂ ಹಾಗುವುದು . ಆತ್ಮ ದೇಹವನ್ನು ಪರಿಶುದ್ದಗೊಳಿಸುವ ಸರ್ವರ ಶ್ರೇಷ್ಟಮತಿಗೆ ತಿಳಿಸಿದರೆ ಸಾರ್ಥಕವಾಗುವುದು. ಸರ್ವರ ಸೃಷ್ಟಿ ಸ್ಥಿತಿಲಯಗಳಿಗೆ ಕಾರಣ ಒಂಕಾರವೇಂದು ತಳಿಸಿದ ಈ ಕೃತಿ ಶರೀರಜ್ಞಾನ ಮಾಡುವ ಚಿಕ್ಕ ಹಾಗೂ ಮಹೋನ್ನತ ಆದ್ಯಾಪ್ತು ಗ್ರಂಥವಾಗಿದೆ ಎಂದು ಕನ್ನಡ ವಿಷಯದಲ್ಲಿ ಪಿ,ಎಚ್,ಡಿ,ಪದವಿಗಾಗಿ ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಸಾದರಪಡಿಸುವ ಸಂಶೋಧನ ಮಹಾಪ್ರಭಾವದಿಂದ ಸಂಶೋಧಕರಾದ ಶ್ರೀ ಆರ್,ವಿ ಪಾಟಿಲರವರು ವೀರಶೈವ ಲಘು ಸಾಹಿತ್ಯಪ್ರಕಾರದ ಕರಣಹಸಿಗೆಯಲ್ಲಿ ತಿಳಿಸಿದ್ದಾರೆ.

## ಓಂಕಾರ ಪ್ರಣುತ್ಪತಿ- ಜಗತ್ಪುತ್ತಿ:-

ಷಟಸ್ತಲ ಚರ್ಕವರ್ತ ಚೆನ್ನಬಸವಣ್ಣನವರು ಕರಣಹಸಿಗೆಯಲ್ಲಿ ಓಂಕಾರ ಎಂಬ ಪ್ರಣುತ್ಪತ್ತಿಯನ್ನು ಅರ್ಥವಾಗುವ ರೀತಿಯಲ್ಲಿ ವಿವರಿಸಿದ್ದಾರೆ. ಓಂಕಾರ ಎಂಬ ಪ್ರಣವದಲ್ಲಿ ಅಕಾರ ವಿಕಾರ, ಮಕಾರ ಇವು ಮೂರು ಬೀಜಾಕ್ಷರ,ಅಕಾರವೇ ನಾದ, ಉಕಾರವೇ ಬಿಂದು, ಮಕಾರವೇ ಕಳೆ,ಮತ್ತಂ: ಅಕಾರವೇ ರುದ್ರ,ಉಕಾರವೇ ಈಶ್ವರ. ಮಕಾರವೇ ಸದಾಶಿವ ಇಂತಿ ಅಕಾರ,ಉಕಾರ,ಮಕಾರಕ್ಕೆ ನಾದಬಿಂದು ಕಳೆ ಆಧಾರ ಆನಾದ ಬಿಂದು ಕಳೆಗೆ ಪ್ರಕೃತಿಯೇ ಆಧಾರ,ಆ ಪ್ರಕೃತಿಗೆ ಪ್ರಾಣವೇ ಆಧಾರ, ಆಪ್ರಾಣಕ್ಕೆ ಲಿಂಗವೇ ಆಧಾರ."ಆ" ಎಂದೊಡೆ "ಅನಹತ" "ಉ" ಎಂದೊಡೆ ನಾದವಿಳಿಯಿತ್ತು, "ಮ" ಎಂಬಲ್ಲಿ ಬಿಂದು ಒಂದುಕೂಡಲು ಶಿವಶಕ್ತಿಯಾಗುತ್ತಂ ಎಂತಹ ಓಂಕಾರವಿತ್ತು. ಈ ಓಂಕಾರ ಪ್ರಾಣವದೊಂದಿಗೆ ಮಹಾಗನಲಿಂಗ ಆಲಿಂಗದಲ್ಲಿ ಜಗತ್ತು ಹುಟ್ಟಿಕೊಂಡಿತ್ತು,ಲಿಂಗಮಧ್ಯೆ "ಜಗತ್ತುಸರ್ವಂ" ಎಂಬ ತತ್ವದೊಂದಿಗೆ ಜಗತ್ತಿನ ಸೃಷ್ಟಿಕುರಿತು ವಿವರ ಇಲ್ಲಿ ಬರುವುದು. ಇಲ್ಲಿಮದಲೆ ಕರಣಹಸಿಗೆ ಕೃತಿ ಪ್ರಾರಂಭವಾಗುವುದು ಹೀಗೆ ಕರಣಹಸಿಗೆಯನ್ನು ನಾಲ್ಕು ಭಾಗಗಳಲ್ಲಿ ವಿಭಾಗಿಸಿ ಅಧ್ಯಯನ ಮಾಡಿದರೆ ಸರಳವಾಗಿ

ಅರ್ಥವಾಗುವುದು, ಈ ಕೃತಿ,ವಚನ,ಗದ್ಯ,ಸುತ್ರಗಳಿಂದ ಕೂಡಿರುವುದು ಸಂಕ್ಷೀಪ್ತಯುತವಾದ ದೇಹಾತ್ಮಕ ತಾತ್ವಿಕತೆಯ ಮೂಲಕ ಪಾರಿಭಾಷಿಕ ಶಬ್ದಗಳಲ್ಲಿ ರಹಸ್ಯಮಯವಾದ ಗೌಪ್ಯ ವಿಷಯಗಳನ್ನು ಇಂದಿನ ವೈದ್ಯರಿಗೆ ಅರಿಯದ ವಿಷಯ ಸಹಿತ ಇಲ್ಲಿ ಅಭಿವ್ಯಕ್ತವಾಗಿದೆ. ಈ ಕೃತಿಯು ಗುರು ಶಿಷ್ಯರ ಸಂಭಾಷಣೆಯುಕ್ತವಾದಂತಿದೆ.ಸಂಬಂದಕ್ಕೆ ತಕ್ಕಂತೆ ವಿವರವಾದ ನಿರೂಪಣೆ ಕೊಟ್ಟು ಒಂದೊಂದು ವಿಷಯವನ್ನು ವಿವರಿಸಲು ರೂಪಕ ಉಪಮೆ ದುಷ್ಟಾಂತಗಳನ್ನು ಕೊಟ್ಟಿರುವವರು. ಸರಳ ಶೈಲಿಯಲ್ಲಿ ಕೃತಿ ನಿರೂಪಣೆಗೊಂಡಿದೆ. ಫ.ಗು.ಹಳಕಟ್ಟಿರವರು ಸಂಪಾದಿಸಿದ ವಚನ ಶಾಸ್ತ್ರಸಾರ ಭಾಗ–೨ ರಲ್ಲಿ ಕರಣಹಸಿಗೆ ಸಾಹಿತ್ಯ ಕೃತಿಯು ಆರಂಭದಲ್ಲಿ ಕರಣಹಸಿಗೆ ಅರ್ಥ ಸಹಿತವಾಗಿ ಈ ಕೃತಿಯನ್ನು ಪ್ರಕಟಿಸಿದ್ದಾರೆ, ಈ ಶಾಸ್ತ್ರದಲ್ಲಿ ತತ್,ತ್ವಯ್ ಪದಾರ್ಥರೂಪವಾದ ಲಿಂಗಸ್ತಲ ಪ್ರಯೋಗವೇ ಸಂಬಂಧ ಸಚ್ಚಿತ್ ಆನಂದ ನಿತ್ಯ ಪರಿಪೂರ್ಣ ಸ್ವರೂಪವೆನಿಸಿದೆ ಶ್ರೀ ಗುರು ಲಿಂಗಜಂಗಮ ಪಾದೊದಕ ಪ್ರಸಾದವೆಂಬ ಪಂಚವಿಧವೇಶ ರೂಪವೆಂದು ಪ್ರತಿಪಾದಿಸುವುದೆ ವಿಷಯ, ಆನೆ ವೃದ್ಧಿ ಇಲ್ಲದೆ ಸಮಾನ ಸಮರ್ಪವಾದ ಸ್ವರೂಪ ಸಾಕ್ಷತ್ಕಾರವಪ್ಪ ಪರದೋಷವೇ ಪ್ರಯೋಜನ. ಒಂದು ಎರಡುಮೂರು ಆರು (೧,೨,೩,೬,)ಮುವತ್ತಾರು (೩೬)ಇನ್ನೂರ ಅದಿನಾರು (೨೧೬) ಮುಂತಾದ ಸರ್ವಚಾರಾ ಸಂಪತ್ತಿನ ಆಚರಣೆಯಲ್ಲಿ ಮುದುಕ್ಷವಾದ ಸದ್ಭಕ್ತಾನಾಧಿಕಾರಿ ಇಂತಪ್ಪ ಗುಣನ್ವಿತನಾದ ಅಧಿಕಾರಿಗೆ ಅನುಗುಣವಾದ ಈ ಶಾಸ್ತ್ರವು ಪ್ರಯೋಜನ, ಈ ಶಾಸ್ತ್ರದಲ್ಲಿ ಮೊದಲಾವುದಯ್ಯ ಎಂದೊಡೆ ಪ್ರಣವುತ್ಪತ್ತಿ ಪ್ರಣವದ ನಿರ್ದೇಶನವೇ ಮೊದಲಾಗಿವುದು, ಅದು ಹೇಗೆಂದೊಡೆ ಅಪ್ವತನುವಿಕ್ತವಾದ ಬ್ರಹ್ಮಾಂಡ ಚರಚರಾಪ್ರಾಣಿಗಳು ತೋರುವ ತೋರಿಕೆ ಏನೇನೂ ಇಲ್ಲದೆಂದು ಸ್ವರಶೂನ್ಯನಿರಾಲಂಬ ಬ್ರಹ್ಮವು ತಾನೊಂದೆ ಇದ್ದಿತು, ಅಂತಿರ್ದ ಪರಬ್ರಹ್ಮ ತಾನೊಂದೆ ಘ್ರತಕಾರಣ್ಯ ಏನೋತ್ರೀ ಸಚ್ಚಿದಾನಂದ ಲಕ್ಷಣಂ ಎಂದು ಹೇಳುತ್ತಿರುವ ಕಾರಣ ಒಂದಾನೊಂದು ತಿಳಿದಪ್ಪದೆ ಗಟ್ಟಿಗೊಂಡು ಎರೆದಪ್ಪವಾದ ಹಾಂಗೆ ನಿರಂಜನ ಬ್ರಹ್ಮವಾಗಿತ್ತು, ನಿರಂಜನ ಪ್ರಣವ ಚಿಂತನಂ ನಿರಂಜೋಕಾರ ಸಂಭವಂ ನೆನಹೆ ನಿರಮಜೋಕಾರ ಚಿಂತಯಾಂ ವಾಕ್ಯಪುಣವ ಮಾಯಜಾತ ಈ ನಿರಂಜನ ಬ್ರಹ್ಮದ ನಿರಂಜೋಕಾರ ಚಿಂತಯಾಂ ವಾಕ್ಯ ಪ್ರಣವ ಮಾಯಜಾತ ಈ ನಿರಂಜನ ಬ್ರಹ್ಮದ ನಿರಂ ಜೋಕಾರಂ ಶಕ್ತಿ ನೆನೆಯು ಮಾತ್ರದಿಂದ ವಾಕ್ಯಪ್ರಣವ ಸ್ವರೂಪಮಾದ ಶೂನ್ಯ ಲಿಂಗವು ಹುಟ್ಟಿತ್ತು,

ಪ್ರಥಮಂ ತಾರಕಾರಂ ದ್ವಿತೀಯಂ ದಂಡ ಉಚ್ಯತೇ
ತೃತೀಯಂ ಕುಂಡಲಾಕಾರಂ ಚತುರ್ಥಂಚಾರ್ಧ ಚಂದ್ರಕಮ್
ಪಂಚಮಂ ದರ್ಪಣಾಕಾರಷ್ಪಷ್ಟಂ ಜ್ಯೋತಿರುಚ್ಯತೇ..

ತಾರಾಕೃತಿ,ದಂಡಾಕೃತಿ,ಕುಂಡಲಾಕೃತಿ,ಅರ್ಧಚಂದ್ರಾಕೃತಿ,ದರ್ಪಣಾಕೃತಿ,ಜ್ಯೋತಿರಾಕೃತಿಗಳೆಂಬ, ಷಷ್ಟಾಕೃತಿಗಳೊಳಗೆ ಒಂಕಾರವೇಂಬ ಪ್ರಣವದಲ್ಲಿ

ಅಕಾರ:"ಓಂಕಾರೇ ತಾರಕಾಕಾರೇ ಅಕಾರಂ "ಚ" ಪ್ರಜಾಯತೇ".ಓಂಕಾರ ಪ್ರಣವದ ತಾರಕಾಕೃತಿ, ದಂಡಾಕೃತಿಗಳೆಂಬ ಉಭಯಾಕೃತಿಗಳನೊಳಗೊಂಡು ಉತ್ಪತ್ತಿಯಾದಂತಾದ್ದೇ ಅಕಾರ ಪ್ರಕರಣವು.

ಉಕಾರ:"ಓಂಕಾರೆ ಕುಂಡಲಾಕಾರೇ ಉಕಾರಂ" ಚ ಪ್ರಜಾಯತೇ' ಎಂದು ಓಂಕಾರ ಪ್ರಣವದ ಕುಂಡಾಲಾಕೃತಿ, ಅರ್ಧಚಂದ್ರಾಕೃತಿಗಳೆಂಬ ವಿಭಾಯಕೃತಿಗಳನ್ನೊಳಗೊಂಡು ಉತ್ಪತ್ತಿಯಾದಂತದ್ದೇ ಉಕಾರ ಪ್ರಣವವು

ಮಕಾರ: ಓಂಕಾರ ಜ್ಯೋತಿರಾಕಾರೇ ಮಕಾರಂ" ಚ "ಪ್ರಜಾಯತೇ"ಎಂದು ಹೇಳುತಿಹುದಾದ ಕಾರಣ ಓಂಕಾರ ಪ್ರಣವದ ಜ್ಯೋತಿರಾಕೃತಿ, ದರ್ಪಣಾಕೃತಿಗಳೆಂಬ ಉಭಯಾಕೃತಿಗಳನ್ನೊಳಗೊಂಡು ಉತ್ಪತ್ತಿಯಾದಂತದ್ದೇ ಮಕಾರ ಪ್ರಕರಣವು.

ಈ ಮೂರು ಬೀಜಾಕ್ಷರ ಕಾರಣವಾದ ಪ್ರಣವಂಗಳು ಎಂಬಲ್ಲಿನ "ಹೇತುರ್ನಾ ಕಾರಣಂ ಬೀಜಂ ಸಾಧನಂ ಲಿಂಗಮಾತ್ರಾಯೋ:" ಎಂದು ಹೇಳುತಿಹುದಾದ ಕಾರಣ, ಶೂನ್ಯಾದಿಬ್ರಹ್ಮಾಂತ,ಬ್ರಹ್ಮವಿಶಿವಾಂತ, ಶಿವದಿರುದ್ರಾಂತ, ರುದ್ರಾದ ಬ್ರಹ್ಮಾಮತ, ರುದ್ರಾದಬ್ರಹ್ಮಾಂತ, ಬ್ರಹ್ಮಾದಿತೃಣಾಂತಮಾದ ತತ್ವ.ಪಂಚಸೃಷ್ಟಿಗಳಿಗೆ ಕಾರಣವಾದ ಪ್ರಣವಂಗಳೆಂಬುದೀಗ–ಇವು ಮೂರು ಬೀಜಾಕ್ಷರ.

ಅಕಾರ ಪ್ರಣವವೇ ಚಿನ್ನದ ಸ್ವರೂಪವಾಗಿಪ್ಪುದು. ಆ ಚಿನ್ನಾದವೆಂಬುದು ತಾನೆಂತಾದ್ದೆಂದರೆ "ಯಥಾ ಧೀರ್ಘಘಂಟಾನಿನಾದವತ್" ಒಂದಾನೊಂದು ಘಟಕಾಸ್ಥಾನದಲ್ಲಿ ಕಟ್ಟರ್ದ ಪಂಚಲೋಹದ ಮಣುವಿನ ತೂಕದಭಾರಿ ಘಂಟೆಯ ನಾಲಿಗೆಯನ್ನು ಹಿಡಿದು ಜಡಿದು ತೂಗಿಬಿಟ್ಟಲ್ಲ, ಅದು ಹೇಗೆ ಜಂ ಜಂ ಜಂ ಎಂದು ಘೋಷಿಸುತ್ತಿಹುದೋ ಅಂತಪ್ಪುದೊಂದು ಸುನಾದ ಘೋಷವನುಳ್ಳದ್ದೇ ಅಕಾರ ಪ್ರಣಮವೇಂಬುದೀಗ (ಆಕಾರವೇನಾದ)

ಉಕಾರ: ಪ್ರಣಮವೇ ಚಿದ್ಬಿಂದು ಸ್ವರೂಪವಾಗಿಪ್ಪುದು,ಆ ಚಿದ್ಬಂದುವೆಂಬುದು ತಾನೆಂತಾದ್ದು ಎಂದೊಡೆ "ಯಥಾಸುವರ್ಣ ತೈಲಧಾರಾವತ್"ಎಂದು ಹೇಳುತ್ತಿಹುದಾದ ಕಾರಣ ಒಬ್ಬ ರಾಜಸ್ತ್ರೀಯಳು ನವರತ್ನ ಖಚಿತವಾದ ಸುವರ್ಣದ ಗಿಂಡಿಯಲ್ಲಿ ಕಮ್ಮೆಣ್ಣೆಯಂ ತುಂಬಿಕೊಂಡು ಏಳು ನೆಲೆಯ ಚಿನ್ನದಪ್ಪರಿಗೆಯ ಲೋವೆಯ ಮೇಲೆನಿಂದು, ಪ್ರಾತಃಕಾಲದಲ್ಲಿ ಕೆಳಕ್ಕೆ ಧಾರೆಗಟ್ಟಿ ಎರೆಯಲು,ಸೂರ್ಯನಕಿರಣ,ಸುವರ್ಣಪ್ರಕಾರ,ತೈಲದರಂಗು ಈ ತ್ರೀವಿಧವು ಕೂಡಿ ಜ್ವಲತ್ಸಂ ಭಾಯಮಾನವಾಗಿ ಝುಗಝುಗಿಸಿ ಬೆಳಗುತ್ತಿಹುದೋ ಅಂತಪ್ಪದೊಂದು ಚಿದ್ಬಿಂದು ಪ್ರಕಾರವನ್ನುಳ್ಳದ್ದೇ ಉಕಾರ ಪ್ರಣಮವೇಂಬುದೀಗ (ಉಕಾರವೇ ಬಿಂದು")

ಮಕಾರ: ಪ್ರಣಮವೇ ಚಿತ್ಕಳಾಸ್ವರೂಪವಾಗಿಪ್ಪದು, ಆಚಿತ್ಕಳೆಯೆಂಬುದು ತಾನೆಂತಾದ್ದೇಂದೋಡೆ "ಯಥಾಅರುಣಪ್ರಕಾಶವತ್" ಎಂದು ಹೇಳುತ್ತಿಹುದಾದ ಕಾರಣ ಒಂದಾನೊಂದು ಮಧ್ಯಾಹ್ನದ ಕಾಲದ ಚಂಡಸೂರ್ಯ ಕೋಟಿಗಳ ಪ್ರಕಾಶವನ್ನು ಕೀಳ್ಪಡಿಸಿ, ಬೆಳಗಲ್ಪಟ್ಟಿ ಮಹಾಪ್ರಕಾಶವನ್ನುಳ್ಳದ್ದೇ ಮಕಾರ ಪ್ರಮಣವೆಂಬುದೀಗ (ಮಕಾರವೇ ಕಳೆಯು).

**ಶ್ಲೋಕ**

ಬಕಾರಂ ನಾದರೂಪಾಂ ಚ ಸಕಾರಂ ಬಿಂದುರೂಪಕಂ
ವಕಾರಂ ಚ ಕಾಳರೂಪಂ ತ್ರಿವಿಧಂ ಬಸವಾಕ್ಷರಂ..

**ಮಂತ್ರಂ**

ಬಕಾರಂ ಗುರುಪೂಪಾಚಂ ಸಕಾರಂ ಲಿಂಗರೂಪಕಂ
ವಕಾರಂ ಚ ಜಂಗಮೇಶ್ವರಂ ತ್ರಿಮೂರ್ತಿ ಬಸವಾಕ್ಷರಂ..

ಬಕಾರಂ ಸತ್ವರೂಪಂ "ಚ" ಸಕಾರಂ ಲಿಂಗರೂಪಕಂ
ಆನಂದಸ್ಥ ವಕಾರ್ಚ ತ್ರಿವಿಧಂ ಬಸವಾಕ್ಷರಂ ..
ಬಕಾರಂ ಮಿಸ್ಸಲಿಂಗಂ ಚ ಸಕಾರಂ ಲಿಂಗರೂಪಕಂ
ವಕಾರಂ ಭಾವಲಿಂಗಂ ಚ ತ್ರಿವಿಧಂ ಬಸವಾಕ್ಷರಂ..

ಇವುಗಳ ಆಧಾರಾಸ್ಪದವಾಗಿಪ್ಪುವು, ಆನಾದಬಿಂದು ಕೆಳಗೆ: ಆ ಪರನಾದ ಪರಬಿಂದು ಪರಕಳೆಯೆಂಬ ಬಸವಾಕ್ಷರತ್ನಯಂಗಳ ಉದಯಾಧಾರ ವಿಶ್ರಾಂತಿಗೆ.

'ಆ' ಎಂದೊಡೆ, ಆನಾಹತ: ಎಂದೆಂದಿಗೂ ಕೇಡಿಲ್ಲದಿರುವ ಶಿವಾಕ್ಷರವು 'ಉ'ಎಂಬ ಅರ್ಥವೇನಯ್ಯ ಎಂದೊಡೆ,ನಾದ ವಿಳಿಯಿತ್ತು ಆ ಎಂಬ ಶಿವಸ್ವರವು, ಉಎಂಬ ಶಕ್ತಿಸ್ವರದಲ್ಲಿ ಬಿಂದು ಕೂಡಿತು. ಅಲ್ಲಿ ಅವು ಬ 'ಭವತಿ' ಎಂಬ ವ್ಯಾಕರಣ ಸೂತ್ರ ವಿಭಾಗದಿಮದ ಅಕಾರ ಉಕಾರ ಕೂಡಿ ಓಂಕಾರವಾಯಿತು ಆಓಂಕಾರ ಪ್ರಣಮದ ಸಮಕ್ಷಮದೊಳಗೆ, ಮ ಎಂಬಲ್ಲಿ ಬಿಂದು ಬಂದುಕೂಡಲ: ಮಕಾರಪ್ರಮಣವೆಂಬುದು ತಾನೇ ಅನುಸ್ವಾರ ಸ್ವರೂಪಿಯಿಂದ ಬಂದು ಪ್ರಯೋಗವಾಗಿ, ಶಿವಶಕ್ತಿಯಾಗುತ್ತಂ: ಅಕಾರ ಉಕಾರ ಮಕಾರ ಇಂತಿ ತ್ರಿವಿಧಕ್ಕೆ ತಾಯಿಚಿತ್ತು: ಇಂತೀ ನಾಲ್ಕು ಒಂದಾದಲ್ಲಿ ಪರಶಿವ ಪರಶಕ್ತಿ ಸ್ವರೂಪವಾಗುತ್ತರುವಂಥ, ಇಂತಹ ಒಂಕಾರವಾಯಿತು: ಓಂ ಎಂಬುದು ಊರ್ಧರ್ಘಸ್ವರವನುಳ್ಳ ಷಟ್ಕೃತಿಗಳು ಸಂಪೂರ್ಣವಾದ ಸೌಜನ್ಯವಾಯಿತು. ಈ ವಿಚಾರವನ್ನು ಡಾ.. ಶ್ರೀ ಇಮ್ಮಡಿ ಬಸವಸ್ವಾಮಿಗಳು ಸಂಪಾದಿಸಿರುವ ಕರಣಹಸಿಗೆಯಲ್ಲಿ ವ್ಯಕ್ತವಾಯಿತು.

ಡಾ, ಫ,ಗು. ಹಳ್ಳಿಕಟ್ಟಿಯವರು ಕರಣಹಸಿಗೆ ಕೃತಿಯನ್ನು ವಚನಾಶಾಸ್ತ್ರಸಾರ ಭಾಗ-೨ ರಲ್ಲಿ ಸಂಪಾದಿಸಿದ್ದಾರೆ, ಇವರು ಷಟಸ್ಥಲ ವಚನ (ಸಂಪುಟ೬)ಗಳ ಜತೆಗೆ ಕರಣ ಹಸಿಗೆಯನ್ನು ಶಿವಾನುಭವ ಗ್ರಂಥಮಾಲೆ ೧೯೨೮ರಲ್ಲಿ ಪ್ರಕಟಿಸಿರುವರು. ನಂತರ ಡಾ..ಆರ್ ಸಿ ಹಿರೇಮಠರವರು ೧೯೬೫ರಲ್ಲಿ ಕರ್ನಾಟಕ ವಿಶ್ವ ವಿದ್ಯಾನಿಲಯದಿಂದ ಷಟಸ್ಥಲ ಚಕ್ರವರ್ತಿ ಚೆನ್ನಬಸವಣ್ಣನವರ ವಚನಗಳು ಎಂಬ ಸಂಪುಟವನ್ನು ಸಂಪಾದಿಸಿ ಪ್ರಕಟಿಸಿರುವರು, ಈ ಗ್ರಂಥದ ಅಂತ್ಯದಲ್ಲಿ ಚೆನ್ನ ಬಸವಣ್ಣನವರ ಇತರ ಸಾಹಿತ್ಯವೆಂದು ೧೬ ಸಂಪುಟಗಳ ವಿಸ್ತಾರದಲ್ಲಿ ಕರಣಹಸಿಗೆಯ ಮೊದಲಗ್ರಂಥವಾಗಿ ಪ್ರಕಟಿಸಲಾಗಿದೆ. ಮೂಲ ಪಥ್ಯ ಪತ್ಯೇಕವಾಗಿ ಅಚ್ಚಾಗಿದೆ. ಪದಚ್ಛೇದ,ಶಕಟ,ರೇಪೇಯ ಪಥವಾಗಿ ಬಳಕೆಯಾಗಿರುವುದು ನಲವತ್ತು ಒಳ ಶೀರ್ಷಿಕೆಗಳ ವಿಭಾಗಗಳೊಂದಿಗೆ ಸಂಸ್ಕೃತ ಶ್ಲೋಕ ಹಾಗೂ ವಚನಗಳಲ್ಲಿ ಮೂಲ ಪಠ್ಯಕ್ಕೆ ಕುಂದು ಬರದಂತೆ ಪ್ರಕಟಿಸಿರುವರು, ಕೆಲವು ಸ್ಕಲಿತ್ಯಗಳ ಕಂಡರು ಅಭಾಸವಾಗುವುಲಿಲ್ಲಿ ವ್ಯಾಖ್ಯಾನಗಳಲ್ಲಿ ಅರ್ಥೈಸುವ ಪ್ರಯತ್ನಗಳನ್ನು ಇಲ್ಲಿ ಮಾಡಲಾಗಿಲ್ಲ, ಪಂಡಿತ ನಾಗಭೂಷಣ ಶಾಸ್ತ್ರಿಗಳ, ಧಾರವಾಢ ಮುರುಘಾಮಠದಿಂದ ೧೯೭೨ ರಲ್ಲಿ ಕರಣಹಸಿಗೆ ಕೃತಿಯನ್ನು ಪ್ರತ್ಯೇಕವಾಗಿ ಪ್ರಕಟಿಸಿದ್ದಾರೆ, ಧೀರ್ಘ ಪ್ರಸ್ತಾವನೆ ಇದೆ ಕರಣಹಸಿಗೆ ಕುರಿತು ೧೦ ಪುಟಗಳ ವೀರಶೈವ ಷಟಸ್ಥಲ ಸಿದ್ದಾಂಥ ಕುರಿತು ಹಿನ್ನೆಲೆಯಾಗಿ ನಿರೂಪಿಸಿರುವರು, ಮುಂದೆ ತೋಟದಾಯಕ ಸಂಸ್ಥಾನ ಮಠ ಗದಗ ಡಂಬಾಳದ ವೀರಶೈವ ಅಧ್ಯಯನ ಸಂಸ್ಥೆಯಿಂದ ೧೯೯೯ ರಲ್ಲಿ ಡಾ..ಫಾ. ಗು ಹಳ್ಳಿಕಟ್ಟಿರವರು ವಚನಶಾಸ್ತ್ರ ಸಾರ ಭಾಗ-೧ ರ ಪೂರ್ವಾರ್ಧ-ಉತ್ತಾರಾರ್ಧವನ್ನು ಡಾ.. ವೀರಣ್ಣರಾಜುರ, ಡಾ.. ಚೆನ್ನ ಬಸವಮಹಾಸ್ವಾಮಿಗಳು, ಪ್ರೋ ವಿ ವಿ ಸಂಗಮಪ್ಪ ಶ್ರೀ ಬಸವರಾಜ ಅವರುಗಳು ಹೊಸದಾಗಿ ಪರಿಕ್ಷರಿಸಿ ಅಲ್ಪ ಸಲ್ಪ ಬದಲಾವಣೆಯಂದಿಗೆ ಪ್ರೆಸ್ ಪ್ರಕಟಿಸಿದ್ದಾರೆ. ಇದರೊಳಗೆ ನಾಲ್ಕು ಭಾಗಗಳು, ೨೧ ಅನುಭಂದಗಳು ಇವೆ. ಏಳನೆ ಭಾಗದ ೫೮ ಪುಟದಿಂದ ೯೯ರವರೆಗೆ ಲಿಂಗಾಂಗ ಸಾಮರಸ್ಯ ಸಹಿತವಾಗಿ ಕೃತಿಯ ಮೂಲ ರೂಪಕ್ಕೆ ದಕ್ಕೆಯಾಗದಂತೆ ಪ್ರಕಟವಾಗಿದೆ.

ಈ ಕರಣ ಹಾಸಿಗೆ ಮೂಲ ಕೃತಿಗೆ ವ್ಯಾಖ್ಯಾನ ಎಲ್ಲಿಯೂ ಇಲ್ಲದಾಗ ಅಂತರಂ ದಿಟ್ಟ ಪ್ರಯತ್ನಕ್ಕೆ ಕೈ ಹಾಕಿದವರಲ್ಲಿ ಪ್ರಮುಖರೆಂದರೆ ಡಾ.. ಇಮ್ಮಡಿ ಶಿವ ಬಸವ ಸ್ವಾಮಿಗಳು ತುಂಬಾ ಸುಂದರ ಹಾಗು ಸರಳವಾಗಿ ವ್ಯಾಖ್ಯಾನ ಮಾಡಿ ಅರ್ಥೈಸಲು ಪ್ರಯತ್ನಿಸಿದ್ದಾರೆ, ಇದು ಒಂದು ಅಂತದವರೆಗು ಚೆನ್ನಾಗಿ ಮೂಡಿಬಂದಿದೆ, ೨೦೦೧ರಲ್ಲಿ ಈ ಕೆಲಸವನ್ನು ಜಗದ್ಗುರು ಶ್ರೀ ಶಿವರಾತ್ರೇಶ್ವರ ಗ್ರಂಥಮಾಲೆ ಮೈಸೂರಿನಿಂದ ಮುದ್ರಿಸಿರುವರು. ಮೂಲ ಕೃತಿ ವ್ಯಾಖ್ಯಾನ ಸಹಿತವಾಗಿದೆ. ನಂತರ ಈ ಕರಣಹಸಿಗೆಯನ್ನು ಇನ್ನು ಸರಳವಾಗಿ ವ್ಯಾಖ್ಯಾನಿಸಿದವರು

ಮುಂಡರಿಗಿಯ ಶ್ರೀ. ಮು,ನಿ, ಪ್ರ. ಜಗದ್ಗುರು ಅನ್ನದಾನೇಶ್ವರ ಮಂಕಾ ಶಿವಯೋಗಿಗಳು ಕರಣಹಸಿಗೆ ಅರ್ಥಾಯಿತು ದೇಹಾತ್ಮ ವಿಜ್ಞಾನವೇಂಬ ಹೆಸರಿನೊಂದಿಗೆ ೪೬ ಬಿಳ ಶೀರ್ಷಿಕೆಯೊಂದಿಗೆ ವ್ಯಾಖ್ಯಾನಿಸಿ ಅರ್ಥೈಸಿದ್ದಾರೆ. ಈ ಕೃತಿ ಸರಳವಾಗಿ ಮೂಡಿಬಂದಿದೆ, ಈ ಗ್ರಂಥದ ವ್ಯಾಖ್ಯಾನಗಳಲ್ಲಿ ಚೆನ್ನಬಸವಣ್ಣನವರು ಹೇಳಿದ ವಿಷಯವನ್ನು ಯಥಾವತ್ತಾಗಿ, ಸರಳ ಕನ್ನಡದಲ್ಲಿ ಕಣ್ಣಾಡಿಸಿದಂತಿದೆ, ಸರಳಾನುವಾದ ರೂಪದಲ್ಲಿ ಇದು ಮೂಡಿ ಬಂದಿದೆ. ವಿನಹ ಯಾವುದೇ ಹೊಲಿಕೆ ವ್ಯೆತ್ಯಾಸ ಚರ್ಚೆ ನಡೆದಿಲ್ಲ, ಆಧುನಿಕ ಶರೀರ ವಿಜ್ಞಾನ ಈ ಕೃತಿಗೂ ತಾಲೋನಿಕರಿಸಿ ಸತ್ಯ ಸತ್ಯತೆ ಕಂಡುಕೊಡುವಲ್ಲಿ ಯಥಾವತ್ತಾಗಿ ಅರ್ಥೈಸಲಾಗಿದೆ. ಅಲ್ಲಲ್ಲಿ ವಿವಿಧ ವಿದ್ವಾಂಸರಲ್ಲಿ ಲೇಖನಗಳು ಕರಣಹಸಿಗೆ ಕುರಿತು ಬಂದಿರುವವು. ಚೆನ್ನಬಸವಣ್ಣನವರು ಮೂಲ ಕೃತಿಯಲ್ಲಿರುವ ವಿಷಯ ಸಂಕ್ಷೇಪ್ತಿಕರಿಸಿ ಹೇಳುವಂತೆ ಕೆಲಸವಾಗಿದೆ. ಈ ಎಲ್ಲಾ ವಿಚಾರಗಳನ್ನು ಕರಣಹಸಿಗೆಯ ಅಧ್ಯಯನದಿಂದ ತಿಳಿದು ಬಂದಿದೆ. ೧೯೩೮ರಲ್ಲಿ ಬಿಜಾಪುರದ ಶಿವಾನುಭವ ಗ್ರಂಥಮಾಲೆಯಿಂದ ಪ್ರಥಮ ಆರುತ್ತಯಾಗಿ ಪ್ರಕಟವಾದ ವಚನಾಶಾಸ್ತ್ರಸಾರ -೨ ಪಾಂಡು ಮಪ್ತಿ ಚೆನ್ನಬಸವ ಸ್ವಾಮಿಗಳು ವೀರಣ್ಣರಾಜು ಮತ್ತು ಬಸವರಾಜಪ್ಪ ಅಂಜಂಪುರ ಶೆಟ್ಟರ್ ಮರು ಪರೀಕ್ಷರಣೆಗೊಂಡು ಲಿಂಗಾಯುತ ಅಧ್ಯಯನ ಸಂಸ್ಥೆಯ ಮೂಲಕದ್ವತೀಯ ಆವೃತ್ತಿಯಾಗಿ ಹೊರಬಂದಿತ್ತು. ಈಗ ಅವರ ತೃತೀಯ ಆವೃತ್ತಿ ಮರುಮುದ್ರಣವೆನಿಸಿದೆ. ಇದರಲ್ಲಲಿ ಹಿಂದಿನ ಆವೃತ್ತಿಯಲ್ಲಿ ಉಳಿದಿದ್ದ ಕೆಲವೊಂದು ಪಾಠ ದೋಷ ಅಕ್ಷರದೋಷವನ್ನು ಮಾತ್ರ ಸರಿಪಡಿಸಿ ಉಳಿದಂತೆ ಯಥಪ್ರಕಾರ ಪ್ರಕಟಿಸಲಾಗಿದೆ. ಈ ಸಂಪುಟದಲ್ಲಿ ಸೇರಿದ ಮೂರನೇಯ ಕೃತಿ ಶಿವಾನುಭಾವ ಶಬ್ದಕೋಶ ಲಿಂಗಾಯಿತ ಧರ್ಮದ ಫಾರಿಭಾಷಿಕ ಪದಗಳಿಗೆ ಸಂಕ್ಷಿಪ್ತವಾಗಿ ವಿವರನೆ ನೀಡುವ ಇದು ಕರಣ ಸಾಹಿತ್ಯದ ಪ್ರಥಮ ಪರಿಭಾಷಕೋಶ ಎಮಬ ಹೆಗ್ಗಳಿಕೆಗೆ ಪಾತ್ರವಾಗಿದೆ. ಈಚೆಗೆ ಈ ಕುರಿತು ನಾಲ್ಕು ಕೃತಿಗಳು ಹೊರ ಬಂದಿದ್ದರು ಇದು ಇಂದಿಗೂ ತನ್ನ ಅಧಿಕೃತತೆ ಹಾಗೂ ಜನಪ್ರೀಯತೆಗಳನ್ನು ಅಜ್ಜಳಿಯದಂತೆ ಉಳಿಸಿಕೊಂಡು ಬಂದಿರುವುದರ ಗಮನ ಅಂಶವಾಗಿದೆ. ಚೆನ್ನಬಸವಣ್ಣನವರಿಗೆ ಪ್ರೇರಕವಾಗಿ ವೇದ ಆಗಮ ಉಪನಿಷತ್ತುಗಳು ಸಹಾಯಕ ಅಕಾರಗಳಾಗಿವೆ.ಇದಕ್ಕೆ ಅದರಿಂದಲೇ ಕಾಲತೀತವಾದ ವೈಜ್ಞಾನಿಕ ಸತ್ಯವನ್ನು ತಿಳಿಸುವ ಮಾನವನ ಇಡೀ ಶರೀರ ಆತ್ಮದ ಅರಿವನ್ನು ಮೂಡಿಸಿ ಅಮೃತ ತತ್ವವನ್ನು ಉಣಬಡಿಸುತ್ತಾ ಆಧ್ಯಾತ್ಮದತ್ತ ಕರೆದೊಯ್ಯುವ ಶಿವಗ್ರಂಥ ಇದಾಗಿದೆ, ಪ್ರತಿಯೊಬ್ಬ ಮನುಷ್ಯ ಜೀವಿಯು ಅವಶ್ಯಕವಾಗಿ ಗಮನಿಸಲೇ ಬೇಕಾದುದ್ದಾಗಿವೆ. ನಮ್ಮ ವಿಶ್ವವಿದ್ಯಾಲಯಗಳು ಈ ಕೃತಿಯನ್ನು ಅವಶ್ಯಕವಾಗಿ ವಿದ್ಯಾರ್ಥಿಗಲು ಓದುವಂತೆ ಅವಕಾಶ ಮಾಡಬೇಕು. ಇದರ ಅಧ್ಯಯನದಿಂದ ಸ್ಥೂಲ,ಸೂಕ್ಷ್ಮ,ಕಾರಣಗಳು ಏಕಕಾಲದಲ್ಲಿ ತನ್ನ ತತ್ವವನ್ನು ಪಸರಿಸುವ ಮಹಾಶಕ್ತಿಯನ್ನು ಪಡೆದುಕೊಂಡಿದೆ. ಕರಣಹಸಿಗೆಗೆ ಅರ್ಥ ದೇಹದಜ್ಞಾನ, ಪಿಂಡಸಂಗ್ರಹ, ದೇಹದೇಹಾಂಕಿಗಳ ಉತ್ಪತ್ತಿ, ಪಂಚವಂಶತಿ ತತ್ವಗಳು, ಮಹಾಭೂತಗಳ ಪಂಚೇಕೃತಿಯು, ಬುದ್ದೇಂದ್ರಿಯಗಳು. ಕರ್ಮೇಂದ್ರೀಯಗಳು, ಕರಣಚತುಷ್ಟಯಗಳು, ದಶನಾಡಿಗಳು, ದಶವಾಯುಗಳು, ಅಷ್ಟಾತ್ಮಗಳು, (ಜೀವಾತ್ಮ ಅಂತರಾತ್ಮಾದಿಗಳು), ಅಷ್ಟತನಗಳು, (ಸ್ಥೂಲ ಸೂಕ್ಷ್ಮಾದಿಗಳು), ಸಪ್ತಧಾಮಗಳ (ರಸ.ರುಧಿರಾಧಿಗಳ) ಉತ್ಪತ್ತಿ (ಉದರಾಗ್ನಿ ಮಂದಾಗ್ನಾದಿಗಳು) ಅಂಗಚತುಷ್ಟಯಗಳು (ಅಂಗ, ಪ್ರತ್ಯಂಗ, ಸಾಂಗಾಂಗ ಉಪಾಂಗ) ತನುತ್ರಯಗಳು, (ಸ್ಥೂಲ, ಸೂಕ್ಷ್ಮ, ಕಾರಣ) ಗಣತ್ರಯಗಳು, (ಸತ್ವ,ರಜ,ತಮ,) ಆತ್ಮತ್ರಯಗಳು (ಜೀವಾತ್ಮ,ಅಂತರಾತ್ಮ,ಪರಮಾತ್ಮ,) ಜೀವತ್ರಯಗಳು (ವಿಶ್ವ,ತೈಜಸ,ಪ್ರಾಜ್ಞ,) ಅವಸ್ಥಾತ್ರಯಗಳು (ಜಾಗ್ರ,ಸ್ವಪ್ನ,ಸುಷುಪ್ತಿ,) ಸತ್,ಚಿತ್,ಆನಂದ, ಸದ್ಭಾವತ್ರಯ್ಯು (ಪ್ರಕಾಶನ,ಪ್ರವರ್ತನ,ಮೋಹನ.) ಮನತ್ರಯಗಳು (ಮನ,ಮನನ,ಮನನೀಯ.) ತ್ರೀಕರಣಗಳು (ಮಾನಸ,ವಾಚಕ,ಕಾಯಿಕ,) ಷಟಚಕ್ರಗಳು (ಆಧಾರ,ಸ್ವಾಧಿಷ್ಠಾನ) ಇತ್ಯಾದಿ

ಮನುಷ್ಯನ ದುರ್ವ್ಯಾಪರಗಳ ವಿವರಣೆ. ಅಷ್ಟಮೂರ್ತಿಮದಗಳು (ಪೃಥ್ಜೀಮದ,ಸಲಿಲಮದ ಇತ್ಯಾದಿ), ಅಂತರಂಗದ ಕ್ಷಮದಗಳು (ಸಂಸ್ಥತ,ತೃಣೀಕೃತಾದಿಗಳು),

ಬಹಿರಂಗದಷ್ಟಮದಿಗಳು (ಕುಲ,ಛಲವಾದಿಗಳು), ಸಪ್ತವ್ಯಸಂಗಳು (ತನುವ್ಯಸನ,ಮನವ್ಯಸನಾಧಿಗಳು), ಷಡೂರ್ಮಗಳು (ಕ್ಷತ್ ಪಿಪಾಸಾದಿಗಳು), ಅರಿಷಡ್ವರ್ಗಗಳು, (ಕಾಮ ಕ್ರೋದಾಧಿಗಳು), ಷಡ್‌ಭ್ರಮೆಗಳು (ಜಾತಿವರ್ಣಾಧಿಗಳು) ಷಟ್ಪದ ವಿಕಾರಗಳು (ಅಸ್ತಿತೆ,ಜಾಯಿತೆ,ಇತ್ಯಾದಿ), ಪಂಚಕ್ಲೇಶಗಳು (ಅವಿದ್ಯೆ,ಅಸ್ಮಿತೆ,ಇತ್ಯಾದಿ), ಅಹಂಕಾರ ತ್ರಯಗಳು (ರಾಜಸಾಹಂಕಾರ, ಸಾತ್ವಿಕಾಹಂಕಾರ, ತಾಮಸಾಹಂಕಾರ), ಇಹಲೋಕದ ತಾಪತ್ರಯಗಳು (ಆಧ್ಯಾತ್ಮಿಕ ಆಧಿಬೌತಿಕ, ಅಧಿದೈವಿಕ), ಸ್ವರ್ಗ ಲೋಕದ ತಾಪತ್ರಯಗಳು (ಕ್ಷಯ.ಅತಿಶಯ,ಸಹಾಸಪತನ). ದುರ್ಭಾವತ್ರಯಗಳು (ಜ್ಞಾನವಿಕೃತಿ, ವರ್ತನ ವಿಕೃತಿ. ಮೋಹನಕೃತಿ), ತ್ರೀದೋಷಗಳು (ಪಾತ,ಪಿತ್ಯ.ಶ್ಲೇಷ,). ಕರಣಹಸಿಗೆ ಮತ್ತು ಲಿಂಗಾಂಗ ಸಾಮರಸ್ಯಕ್ಕೆ ಈಎಲ್ಲಾ ಆಯಾಮಗಳನ್ನು ಇಟ್ಟಕೊಂಡು ಮನ ಬುದ್ದಿ ವಿಕಾಸಗೊಳಿಸಿ ಸಾಧಕನು ಲಿಂಗಾಂಗ ಸಾಮರಸ್ಯಗೊಳ್ಳಲು ಈ ಶರೀರೇಂದ್ರಿಯಾ ಬುದ್ದಿಯನ್ನು ದಾಟಲು ಕರಣಹಸಿಗೆ ಬಹಳ ಉಪಯುಕ್ತವಾಗುವಂತದ್ದು, ಕರಣದಲ್ಲಿ ಲಯಂ ಹೊಂದಿ ಜೀಹ್ವೆಯ (ನಾಲಿಗೆ) ಸೃಷ್ಟಯಪ್ಪ. ನಾದವೇ ಸೂಕ್ಷ್ಮ ಮನರೂಪವಾಗಿರುವುದು. ಜೀಹ್ವೆಯಲ್ಲಿ ಲಯವನ್ನು ಹಂದಿ ಗುಹೆಯಲ್ಲಿ ಸೃಷ್ಟಯಪ್ಪ ಬಿಂದುವೇ ಸ್ಥೂಲಶರೀರ ರೂಪಂವಾಗಿಯುವುದು. ಬಿಂದುವಿನ ಲಯಕ್ಕೂ ನಾದದ ಸೃಷ್ಠಗೂ ಜೀಹ್ವೆಯ ಕಾರಣರೂಪವಾಗಿಹುದು. ನಾದದಲಿ ಕೂಡಿ ಭಾವಲಿಂಗದಲ್ಲಿ ಪ್ರಕಾಶವಾಗಿ ಬ್ರಹ್ಮಯೀನಿಯಲ್ಲಿ ಬಿಟ್ಟು ದಿವ್ಯ ತೇಜಸ್ವ ಶರೀರ ಮಾಗಿ ತೋರುತ್ತಿಪ್ಪದೆ, ಪರಮನು ಬಿಂದುವಿನಲ್ಲಿ ಕೂಡಿ ಲಿಂಗಮುಖದಲ್ಲಿ ಪ್ರಕಾಶಮಾಗಿ ಕರ್ಮಯೋಗಿಯಲ್ಲಿ ಬಿಟ್ಟು ತೇಜಸ್ಸೆ ಶರೀರಮಾಗಿ ತೋರುವನೇ ಜೀವಾತ್ಮನು.ಇಂಥಪ್ಪ ಬಿಂದುವನ್ನು ಕರ್ಮಕಾರಣವಾದ ಸ್ವಸ್ತ್ರೀ ಗರ್ಭದಲ್ಲಿ ಬಿಟ್ಟು ಆಸತ್ ಸಮತಾನದಂದ, ಸ್ವರ್ಗಾದಿ ಭೋಗಗಳು ಪಡೆದದಾದಿ ಜ್ಞಾನ ಪ್ರಕರಣಮಪ್ಪ ಪುರುಷನು ಗರ್ಭದಲ್ಲಿ ವಿವೇಕನೇಂಬ ಪುತ್ರನಂ ಪಡೆದು ಅದರಿಂದ ಮೋಕ್ಷ ಸಾಧನೆ ಮಾಡಿಕೋಬನೆ ಪರಮನು ಇಂತಪ್ಪ ಸೂಕ್ಷ್ಮ ಶರೀರದ ನಾದ ಮಧ್ಯದಲ್ಲಪ್ಪ ನನಗೂ ಜೀವ್ಯರೂಪಮಪ್ಪ ಮಹಾ ಗುರುವಿನ ಕರಣದಿಂದ ಸಣಬಣಧವಾವಾಗಿ ಪ್ರಾಣಿಗ್ರಹಣಮಂ ಮಾಡಿ ಕೊಟ್ಟ ಬಳಿಕ ನೀಣೀ ಪತಿ ನಾನೇ ಸತಿಯಾಗಿ ನಿನ್ನ ಪರಮಾನಂದ ರತಿಸುಖದಲ್ಲಿ ನಾನು ಲೀನನಾದದಲ್ಲಿ ನನ್ನ ಸಂಬಂಭಪಟ್ಟ ಸ್ಥೂಲ ದೇಹದಲ್ಲಿ ನಿನ್ನ ಸಣ್ಣಬಣಧಮಪ್ಪ ಸೂಕ್ಷ್ಮದಲ್ಲಿ ಲೀನ ಮಪ್ಪದೇ ಕೈವಲ್ಯ ಕಾರಣ ಮಹಾಗನ ದೊಡ್ಡ ದೇಶಿಕಾರ್ಯ ಗುರುಪ್ರಭುವೇ ಎಂದು ಫ,ಗು. ಹಳಕಟ್ಟಿ ಸಂಗ್ರಹದ ಸಮಗ್ರ ಸಾಹಿತ್ಯ ಸಂಪುಟದ ವಚನ ಶಾಸ್ತ್ರಸಾರ ಭಾಗ–೨ರಲ್ಲಿ ೧೧೦ಳನೇಯ ಪುಟದಲ್ಲಿ ವ್ಯಕ್ತಪಡಿಸಿದ್ದಾರೆ.

ಕರಣಗಳೆ ಸ್ಥೂಲರೂಪದ ಶರೀರಮಾಗಿ ತತ್ಸಂಭಂದವಾದ ವಿಷಯಂಗಳೆ ಕಾರಣ ಸ್ವರೂಪವಾದ ಮನವಾಗಿ ಇಂತಪ್ಪ ಶರೀರದಲ್ಲಿ ಧಾತುಗಳು ಮನದಲ್ಲಿ ಗುಣಂಗಳೂ ಹುಟ್ಟಿ ಧಾತುಗಳು ಗುಣಂಗಳನವಗ್ರಹಿಸಿ, ಗುಣಗಳು ಧಾತುಗಳನವಗ್ರಹಿಸಿ ಧಾತುಗುಣಗಳಂ ಗುಣಧಾತುಗಳಂ ನಾಲ್ಕು ಬೇಧಪಡೆದು ಅಂತಕರಣ ಚತುಷ್ಟಯವೆನಿಪ್ಪ ಸೂಕ್ಷ್ಮಶರೀರದಲ್ಲಿ ಜೀವನು ನೆಲಸಿ ಕರ್ಣನಿಕರ್ಣಂಗಳಿಗೆ ತಾನೇ ಕರ್ತೃವಾಗಿ ಕರ್ಣಂಗದಲ್ಲಿ ಕೂಡಿದ ಕಾರಣವೇ ಬಾಲ್ಯವಾಗಿ ಕಾರಣದಲ್ಲಿ ಕೂಡಿದ ಕಾರಣವೇ ಮನಸ್ಸಾಗಿ ಈ ಎರಡರ ನಷ್ಟವೇವಾರ್ದ್ಯವಕ್ಕಾಗಿ ಅಣತಪ್ಪ ವಾರ್ದ್ವೈಕದಲ್ಲಿ ಧಾತುಗುಳಗಳಂ ಬಿಟ್ಟು ಕರಂಗಳೊಳಗೆ ಕೂಡಿ ಅಗ್ನಿಮುಖದಲಿ ಲಯವಂ ನೈದಿಪೋದಲ್ಲಿ ಮರಳಿ ಸೃಷ್ಟಿಯಪ್ಪ ಪರಿಯೆಂತೊಡೆ ಆಕಾರಣ ವಿಷಯಂಗಳೆಲ್ಲ ಜಲಮುಖದಲಿ ದ್ರವಿಸಿ ಆ ಗುಣಂಗಳಿಪ ಧಾತುಗಳು ಪ್ರಕಟವಾಗಿ ತಥ್ವಾಸನೆಯ ಹಿಡಿದು ಬಿಂದು ಮುಖದಲ್ಲಿ ಶರೀರರೀಯಾಗಿ ತೋರಿಪುದೇ ಸೃಷ್ಟಿಯು. ಆ ಸೃಷ್ಟಿಯು ಸೂಕ್ಷ್ಮದಿಂದಲೇ ಸ್ಥೂಲ ಮುಗಿಸಿ ಆ ಸೂಕ್ಷ್ಮವು ಕಾಣಿಸದೆ ಸ್ಥೂಲವು ಕಾಣಿಸುತ್ತಿಪ್ಪದು. ಆ ಸ್ಥೂಲ ಮಮ್, ಬಿಟ್ಟು ಸೂಕ್ಷ್ಮ ಗೋಚರಮಾಗಿರ್ಪ ಲಯಂ ತಾನೇ ಗೋಚರವಾಗಿ ತಾನೇ ಮನಂ ಸೃಷ್ಟಿಕಾರಣಮಾಗಿರ್ಪುದೇಂತೊಂದಡೆ ಬೀಜದಲ್ಲೆ ಫೈರು ಪುಟ್ಟ ಆ ಬೀಜಂ ಕಾಣಿಸದೆ ಫೈರೆ

ಕಾಣಿಸಿ ಆ ಫೈರಂ ಕೊಯಿದು ತುಳಿದು ಹೊಕ್ಕಿದಲಿ ಆ ಫೈರಂ ಬಿಟ್ಟು ಬೀಜವು ಪ್ರತ್ಯಕ್ಷಮಾಗಿ ಫಲಯಾತನೆಗೊಳಗಾಗಿ ಪುನಃ ಸೃಷ್ಟಿ ಕಾರಣಮಾಗಿರ್ಪದಂದಿ ಸ್ಥಲದೊಳಗೆ ಸೂಕ್ಷ್ಮವೊ, ಸೂಕ್ಷ್ಮದೊಳಗೆ ಸ್ಥಲವೊ ಅಡಗಿ ಒಂದು ಕಾಣಿಸಲೊಂದು ಕಾಣಿಸಲ್‌ದಿರ್ಪ್ ಈ ದಂಡುಗೊದಂ ಬಿಡಿಸಿ ಸಲಹುದೆಯಾ ಎಂಬಿ ಸಂದೇಹದಿಂ ಇಂದು ಮುಂದು ತಿಳಿಯದೆ ಮಂದಮತಿಯಾಗಿರ್ಪೆನ್ ಒಂದನವಂ ಬಿಡಿಸಿ ನನ್ನಡೆಕೆ ಧಾವರೆಯೊಳ್ ಸಂಬಂದಿಸುವುದೆಂದಿಗೆ ಏಳುಮಹಾಗನ ದೊಡ್ಡ ದೇಶಿಕಾರ್ಯ ಗುರು ಪ್ರಭುವೆ ಎಂದು ಫ,ಗು, ಹಳಕಟ್ಟಿ ವಚನಸಾರ ಭಾಗ-೨ರಲ್ಲಿ ವ್ಯಕ್ತವಾಗಿದೆ.

ಮನಸ್ಸೆ ಅಂತಕರ್ಣವಾಗಿಯು ಶರೀರವೇ ಕಾರಣವಾಗಿಯು ಪ್ರಪಂಚವೇ ಉಪಕರಣವಾಗಿಯು ಇರ್ಪ ಜೀವನು ಉಪಕರಣದಲ್ಲಿರ್ಪ, ನಾದವನ್ನು ಮಿತ್ಯದಲ್ಲಿ ವೆಚ್ಚಿಸಿ ತಂದುಕ್ಕಾನುಭವಕ್ಕ ತಾನಂ ಕಾರಣಮಾಗಿರಲು ಜೀವರಿಗೆ ಪಂಚವಂಶ ತಿತತ್ವರೂಪಮಾದ ಉಪಕರಣಗಳೇ ಸ್ಥೂಲವೂ, ಸಪ್ತಧಾತು ದಶೇಂದ್ರೀಯ ರೂಪವಾದ ಕರಣವೇ ಸೂಕ್ಷ್ಮವೂ, ಅಹಂಕಾರ ಜ್ಞಾನರೂಪವಾದ ಅಂತಃಕರಣವೇ ಕಾರಣವು ಆಗಿ ಕರಣಕ್ಕುಪಹತಿ ಒಂದರೆ ಉಪಕರಣಂಗಳಂ ಬಿಟ್ಟು ಆಯಾ ಕರ್ಮವಾಸನೆಯಂ ಭಾವದಲ್ಲಿ ಗ್ರಹಿಸಿ ಮರಳಿ ಸಂಪಾದಿಸಿದೆನು ಎಂಬ ಭ್ರಮೆಯಿಂದ ಕುದಿದು ಕೋಪಿಲೆಗೊಂಡು ತೊಳುತ್ತರ್ಪುದೇ ಭವವು,ಇಂತಪ್ಪ ಭವಕೋಪಿಲೆಗೆ ಹೇಸಿ, ಮಹಾಗುರುವಿನ ಮರೆ ಹೊಕ್ಕು, ಆಗುರುವಿತ್ತ ಮಹಾಲಿಣಗದಿಂ ಇಂತಪ್ಪ ಕರಣಂಗಳು ಶುದ್ದಮಾಡಿ ಅಲ್ಲಿರ್ಪ ನಾದಬಿಂದು ಸುಖವನ್ನು ಲಿಂಗಕ್ಕಾರ್ಪಸಿ,ತತ್ಪಾಸಾದಾನುಭವ ಪ್ರವರ್ಧನಮಾಗುತ್ತಿರಲು, ನಾಹಂ, ಕೋಹಂ, ಸೋಹಂ, ಭ್ರಮೆಗಳಡಗಿ ಸ್ಥೂಲ, ಸೂಕ್ಷ್ಮ, ಕಾರಣ ತನುತ್ರಯಂಗಳುಡುಗಿ,ಲಿಂಗವೇ ಅಂಗಮಾಗಿ ಲಿಂಗೋಪ ಭೋಗಿಯಾಗಿರ್ಪುದೇ ಲಿಂಗೈಕ್ಯ ಕಾಣಾ ಮಹಾಘನ ದೊಡದಡ ದೇಶಿಕಾರ್ಯ ಗುರುಪ್ರಭುವೆ ಎಂದು ಹಳಕಟ್ಟಿ ಸಮಗ್ರ ಸಾಹಿತ್ಯದ ವಚನಶಾಸ್ತ್ರ ಭಾಗ-೨ ರಲ್ಲಿ ೧೦೭ ರಲ್ಲಿ ವ್ಯಕ್ತವಾಗಿದೆ,

ಈ ವರೆಗೆ ವರ್ಣಸಲ್ಪಟ್ಟ ದೇಹವು ಜೀವವು ಜಗತ್ತು ಹಾಗೆಯೇ ಜಗತ್ತಿನಲ್ಲಿಯ ಶಕ್ತಿಗಳು ಪರಮಾತ್ಮನಲ್ಲ ಆದರೆ ತನ್ನನ್ನು ತಾನಾರಿದರೆ ತಾನೇ ಪರಮಾತ್ಮನು. ತನ್ನರೀವೇ ಗುರು ಅದೇ ಲಿಂಗೈಕ್ಯ ಸ್ಥಿತಿಯು ಎಂದೆನಿಸಿಕೊಳ್ಳಲ್ಪಡುತ್ತದೆ. (೧-೪)ಇದಗೊಸ್ಕರು ಮನುಷ್ಯನು ವ್ಯಸನಾದಿಗಳನ್ನು ಇಂದ್ರಿಯಾ ವಿಕಾರಗಳನು ಜೀವ ಭಾವವನ್ನು ತೊರೆಯಬೇಕು. ಮತ್ತು ಪಾರಮಾರ್ಥವನ್ನು ಮೊರೆಯೋಗಬೇಕು. (೫-೬) ಷಟಸ್ಥಲ ಮಾರ್ಗದಂತೆ ಆಚರಿಸಬೇಕು. ಅಂದರೆ ಲಿಂಗಾಂಗ ಸಾಮಾರಸ್ಯ ಸ್ಥಿತಿಯ ಪ್ರಾಪ್ತವಾಗುವುದು, ಇದರಲ್ಲಿ ಕರಣಹಸಿಗೆಯ ಜ್ಞಾನವು ಅತ್ಯವಶ್ಯಕವಾದುದೆಂದು ವಚನಕಾರ ವಚನಗಳಿಂದ ತಿಳಿದು ಬರುತ್ತದೆ.

ಕರಣಹಸಿಗೆಯಲ್ಲಿ ಹೇಳಲ್ಪಟ್ಟ ತತ್ವಗಳೆಲ್ಲವು ಎಲ್ಲಾ ದೇಹಿಗಳಿಲ್ಲಿಯಾ ಸಮನಾಗಿರ್ಪವು,ಗುರು ಕಾರುಣ್ಯವ ಪಡೆದು ಲಿಂಗಾಂಗ, ಸಂಬಂಧಿಗಳಾದ ಶರಣ ಜನಮಗಳಲ್ಲಿ ಈ ಕಾರಣಗಳೆಲ್ಲವು ಮಂತ್ರ ತತ್ವರೂಪವಾಗಿ ಲಿಂಗಾಪ್ರತಕ್ಕೆ ಬೇಕಾದ ಪದಾರ್ಥಮಗಳಾಗಿರ್ಪವು. ಕಾಯಾರ್ಪಣ, ಕರಣಾರ್ಪಾಣ, ಭಾವಾರ್ಪಾಣ, ಪರಿಪೂರ್ಣರ್ಪಣವೆಂದು ಹೇಳುವುದೀಗ ಕರಣಹಸಿಗೆ ಜೊತೆಗೂಡಿದ ಮಿಶ್ರಾರ್ಪಣವೆಂದು ಶಾಸ್ತ್ರವು ಮತ್ತು ಷಟಸ್ಥಲ ಬ್ರಹ್ಮ ನೊಡಗೂಡಿದೆಂದು ನಿಲುಕುವುದಯ್ಯ ಅರ್ಪಿತ-ಅನರ್ಪಿತವೆಂದು ಒಪ್ಪಕ್ಕೆ ನುಡಿಯಬಹುದಲದಲದೆ ಅರ್ಪಣದೊಳಗಣ ಅರ್ಪಣದ ಬೇದವನರಿದು. ಸೊಪ್ಪಡಿಗಿದ ನಿಷ್ಪತಿ ನಿಜಲಿಂಗೈಕ್ಯದರಿವು ಅದೆಂತೇಯ್ಯಯೆಂದಡೆ ಎಂಬ ವಿಚಾರವನ್ನು ಕರಣಹಸಿಗೆ "ಅ"ಕಾರವು "ಉ"ಕಾರವು "ಮ"ಕಾರವು ಈ ಪ್ರಣವವು ಒಂದುಗೂಡಿ ಪರಂಜ್ಯೋತಿ ಸ್ವರೂಪವಾದ ಓಂಕಾರವು ಹುಟ್ಟಿತ್ತು, ವೇದಗಳು ಓಂಕಾರದಲ್ಲಿ ಹುಟ್ಟಿದವು, ಸಪ್ತಸ್ವರಾದಿಗಳು ಓಮಕಾರದಲ್ಲಿ ಹುಟ್ಟಿದವು. ಸಮಸ್ತವಾದ ಸಚಾರಚಾರಗಳು ಮೂರು ಲೋಕಗಳು

"ಓಂ"ಕಾರದಲ್ಲಿ ಹಿಟ್ಟಿದವು. ಓಂಕಾರವು ಸರ್ವವ್ಯಾಪಕವಾದದ್ದು. "ಓಂ"ಕಾರವನ್ನು ಬಿಟ್ಟು ಮತ್ತೊಂದು ಶೋಭಿಸದು,ಓಮಕಾರವು ಪರಬ್ರಹ್ಮವು.ಓಂಕಾರವು ಶ್ರೇಷ್ಟವಾದ ಮೋಕ್ಷ ಸ್ಥಾನವು ಓಂಕಾರವು ನಾದರೂಪವಾದುದೊಂದು "ಓಂ"ಕಾರ ಮಂತ್ರ ರೂಪವಾದುದ್ದೆಂದು ಓಂಕಾರವು ಸ್ವರ,ವ್ಯಾಪಕವಾದದೇಂದು ಗೌಪ್ಯವಾದ ಶಿವನ ಮುಖವೆಂದು ತಿಳಿಯತಕ್ಕದಲ್ಲ.

"ಸದ್ಯೋಜಾತೋದ್ಭವಾ ಭೂಮಿರ್ವಾಮವೇದೋದ್ಭವಂ ಜಲಂ..
ಅಘೋರಾದ್ವಹ್ನಿರುತ್ಪನ್ನಸ್ತತ್ಪುರುಷಾದ್ವಯರುದ್ಭವಃ ..
ಈಶಾನಾದ್ಯಗನಂ ಜಾತಂ ಪಂಚಬ್ರಹ್ಮಮಯಂ ಜಗತ್.."

ಎಂದುದಾಗಿ ಸದಾಶಿವನ ಸದ್ಯೋಜಾತ ಮುಖದಲ್ಲಿ ಪೃಥ್ವಿ ಪುಟ್ಟತ್ತು:ಪಾಮದೇವ ಮುಖದಲ್ಲಿ ಅಪ್ಪು (ಜಲ)ಪುಟ್ಟತ್ತು: ಅಘೋರಮುಖದಲ್ಲಿ ಅಗ್ನಿ ಪುಟ್ಟತ್ತು: ತತ್ಪುರುಷಮುಖದಲ್ಲಿ ವಾಯುಪುಟ್ಟತ್ತು:ಈಶಾನಮುಖದಲ್ಲಿ ಆಕಾಶಪುಟ್ಟತ್ತು:ಇಂತೀ ಪಂಚಮಹಾಭೂತಗಳು ಪುಟ್ಟಿದವು.

**:"ಅ"ಕಾರ ಉಕಾರ ಮಕಾರ ವಿಷಯಗಳ ಮಹತ್ವ:**

೧.'ಅ'ಕಾರ ಪ್ರಣವದೊಳಗೆ:- 'ಅಕಾರ' ಪ್ರಣವವು ಅಗ್ನಿ ತತ್ವದಿಂದ ಕೂಡಿದ್ದು ಚೈತನ್ಯಯುತವಾಗಿರುವುದು ಇದರಿಂದ ಋಉಗ್ವೇದವು ಸೃಷ್ಠಿಯಾಗುದ್ದು ಇದರ ಅಧಿದೇವತೆ ರುದ್ರನಾಗಿರುವನು. ಬೀಜದಲಿ ವೃಕ್ಷದಂತೆ ಅಡಗಿರುವನು. ರುದ್ರನು ಸಂಪಾಹರಮೂರ್ತಿ ಈತ ತನ್ನನ್ನು ತನ್ಮಯನಾಗಿ ಆರಾಧಿಸುವ ಭಕ್ತರ ಸರ್ವ ಸಮಸ್ಯೆಗಳನ್ನು ಪರಿಹರಿಸುವನು.ಆಗಾಗಿ ಆಕಾರದಲ್ಲಿಯೇ ಜಗತ್ತಿರುವುದು

೨.'ಉ'ಕಾರ ಪ್ರಣವದೊಳಗೆ:- "ಉ"ಕಾರ ಪ್ರಣವವು ಆಕಾರ ತತ್ವದಿಂದ ಕೂಡಿದ್ದು, ಆಕಾಶದಂತೆ ವಿಶಾಲವಾದ ರೀತಿಯದ್ದಾಗಿದೆ. ಇದರಿಂದ ಯಜುರ್ವೇದ ಹೊಂ ಬಂದಿರುವುದು. ಅಧಿದೇವತೆ ಈಶ್ವರ ಹೂವಿನಲ್ಲಿನ ಸುಗಂಧದಂತೆ 'ಉ'ಕಾರ ಪ್ರಣವದಲ್ಲಿ ಈಶ್ವರ ಇರುವನು.ಈಶ್ವರ ತತ್ವವು ಜಗತ್ತಿನ ಅಂತರ್ದಾನ ಅಥವಾ ಲೋಪಗೊಳಿಸುವ ಕಾರ್ಯ.

೩.'ಮ'ಕಾರ ಪ್ರಣವದದೊಳಗೆ:-"ಮ"ಕಾರ ಪ್ರಣವವು ಸರ್ವವಿದ್ಯೆಗಳ ಸಾಕಾರ ರೂಪವಾಗಿದ್ದು ೬೪ ವಿದ್ಯೆಗಳನ್ನು ತನ್ನೊಳಗಿರಿಸಿಕೊಂಡಿರುವುದ. 'ಮ'ಕಾರದಿಂದ ಸಾಮವೇದವು ಸಂಪೂರ್ಣಗೊಂಡಿದ್ದು. ಸದಾಶಿವನು ಅಧಿದೇವತೆಯಾಗಿರುವ 'ಮ'ಕಾರ ಪ್ರಣವವು ರತ್ನದೊಳಗಿನ ಹೊಳಪಿನಂತೆ 'ಮ'ಕಾರ ಸದಾಶಿವ ಮೂರ್ತಿ ಇರುವುದು. ಆಸದಾಶಿವ ಅನುಗ್ರಹ ಮಾಡುವನು.

"ಓಂ"ಕಾರವೆಂಬುಹುದು ಶಿವಶಕ್ತಿಯ ಸಂಪುಟ ಶ್ರೀ ಜಗದ್ಗುರು ಅನ್ನದಾನೇಶ್ವರ ಮಹಾಶಿವಯೋಗಿಗಳು ವ್ಯಾಕ್ಯಾನಿಸುವಂತೆ 'ಮ'ಕಾರ ಪ್ರಣವದ ವಿಶೇಷತೆಯನ್ನು ಮುಣದುವರೆದು ನಿರೂಪಿಸಿರುವರು. ಯದ್ರುಷ್ಟಮ್,ತನ್ನಷ್ಟಮ್,ಜಗತ್ತಿನಲ್ಲಿ ಹುಟ್ಟಿದ ಪ್ರತಿಯೊಂದು,ವಸ್ತುವಿಗೆ ಅಂತ್ಯವಿರುವುದು ಸಹಜ.ಚಂದ್ರನಲ್ಲಿ ಕಾಣುವ ಅದಿನಾರು ಕಲೆಗಳು ಇವನಲ್ಲಿ ಅಡಗುವಂತೆ. ಸೂರ್ಯನಲ್ಲಿ ಕಾಣುವ ಸಹಸ್ರ ಕಿರಣಗಳು ಸೂರ್ಯನಲ್ಲೇ ವಿಲೀನವಾಗುವಂತೆ 'ಮ'ಕಾರ ಪ್ರಣವದಲ್ಲಿ ಅ,ಉ,ಯ,ಕಾರಗಳು ಸಮರಸಗೊಂಡು ಒಂದರಗಳಂದು ಲೀನವಾಗಿ ಸ್ವಯಂ ಜ್ಯೋತಿ ರೂಪವೆನಿಸಿದ. ಓಂಕಾರ ಪ್ರಣವವು ಉತ್ಪತ್ತಿಯಾಗಿತ್ತು. ಈಗ ಈ ಓಂಕಾರ ಪ್ರಣವದಿಂದ ಋಗ್ವೇದ, ಯಜುರ್ವೇದ, ಸಾಮವೇದ, ಅತರ್ಣವೇದ, ಮತ್ತುಉಪವೇದಗಳಾದಸ್ಥಾಪತ್ಯವೇದ, ಗಾಂಧರ್ವವೇದ, ಧನುರ್ವವೇದ, ಆಯುರ್ವೇದಗಳು ಹುಟ್ಟಿಕೊಂಡವು. ಅಷ್ಟೇ ಅಲ್ಲದೆ ಸಂಗೀತದ ಸಪ್ತ ಸ್ವರಗಳಾದ

ಸರಿಗಮಪದನಿಸ ಜೊತೆಗೆ ವೇದ ಪುರಾಣಗಳಲ್ಲಿ ಬರುವ ಉದಾತ್ತ ಅನುದಾತ್ತ ಸ್ವರಿತ.ಪ್ರಚಯ ಎಂಬಂತಹ ಸ್ವರಗಳು "ಓಂ" ಕಾರ ಪ್ರಣವದಿಂದ ಉಗಮಗೊಂಡಿದೆ. ಸೃಷ್ಠಿಯ ಸರ್ವಸಚಾರಕ ಸ್ವರ್ಗ, ನರಕ, ಮೃತ್ಯು, ಪಾತಾಳ, ಭೂಲೋಕಗಳೆಲ್ಲವೂ "ಓಂ"ಕಾರದಿಂದ ಹುಟ್ಟಿಕೊಂಡವು. ಸಕಲ ವಿದ್ಯೆಗಳಿವೆ; ೬೪ವಿದ್ಯೆಗಳಿಗೆ ಆಶ್ರಯ ಸ್ಥಾನವಿದೆ. ಇದರಿಂದ ಸಾಮವೇದವು ಸಾಂಗವಾಯಿತು. 'ಮ'ಕಾರ ಪ್ರಣವಕ್ಕೆ ಸದಾಶಿವನೇ ಅಧಿದೇವತೆ.ಸದಾಶಿವನು ಚೆನ್ನ ಬಣ್ಣದಂತೆ 'ಮ'ಕಾರ ಪ್ರಣವದಲ್ಲಿ ಸದಾಶಿವ ಮೂರ್ತಿಯು ಅಡಗಿರುವನು, ರುದ್ರ–ಈಶ್ವರರು, ಸಂಹಾರತಿರೋದಾನ ಕತೃಗಳಾದರೆ ಸದಾಶಿವನ ಅನುಗ್ರಹ ಕರ್ತನು ತೀರೋದಾನವೆಂದರೆ ಅಡಗಿಸಿಡುವುದು.

'ಅ'ಕಾರ ಎಂಬುದು ಶಿವಸ್ವರವಾದರೆ 'ಉ' ಎಂಬುದು ಶಕ್ತಿ ಸ್ವರವು. 'ಅ'ಕಾರವು 'ಉ'ಕಾರದೊಡನೆ ಕೂಡಿದಾಗ ವ್ಯಾಕರಣ ನಿಯಮದಂತೆ 'ಓಂ' ಕಾರವೆನಿಸುವುದು. ಅದಕ್ಕಾಗಿಯೇ ಚೆನ್ನಬಸವಣ್ಣನವರು ಪ್ರಾರಂಭದಲ್ಲಿ "ಶಿವಶಕ್ತಿಯಾಗುತ್ತಾ ಇಂತಹ ಓಂ ಕಾರವಾಯಿತು ಎಂದು ನಿರೂಪಿಸಿರುವುದು 'ಓಂ'ಕಾರವು ಶಿವ–ಶಕ್ತಿಯ ಸಂಪುಟವೆನಿಸಿದೆ.

'ಅ' ಕಾರ ಪ್ರಣವ ೧೬ ಸ್ವರಗಳು 'ಉ'ಕಾರ ಪ್ರಣವ ೨೫ ವ್ಯಂಜನಗಳು(ವಿಕಲಾಕಾರ) 'ಮ' ಕಾರ ಪ್ರಣವಗಳು ೧೧ಅವರ್ಗೀಯ ಒಟ್ಟು ೫೨ ಅಕ್ಷರ ಸರ್ವ ಸಕಲ ವೇದ,ಶಾಸ್ತ್ರ,ಪುರಾಣ,ಟೀಕೆ,ಧರ್ಮಗ್ರಂಥಗಳು,ಮಂತ್ರ,ವೈದ್ಯ,ಇತಿಹಾಸ,ಅನಂತ ತತ್ವ ಬ್ರಹ್ಮಾಂಡಷಟ್ಟದ, ಷಡ್ಗುಣ, ತತ್ವಪಂಚಕಾ ಮುಂತಾದವುಗಳ ಮೂಲ ಕಾರಣವೆನಿಸಿದವು. 'ಅ' ಕಾರ,'ಉ' ಕಾರ,'ಮ' ಕಾರ, ಇವುಗಳನ್ನು ಪ್ರಣವರಥಗಳೆಂದು ಹೇಳುವರು. ೭(ಏಳು)ಕೋಟಿ ಮಹಾಮಂತ್ರಗಳಲ್ಲಿಯೆ ಅತ್ಯಂತ ಶ್ರೇಷ್ಠ ಮಹಾಮಂತ್ರ, 'ಓಂ" ಕಾರವೇ ಬಿಂದು 'ಓಂ' ಕಾರವೇಕಳಾತೀತ ಬ್ರಹ್ಮಾಂಡವೆಲ್ಲ ಓಂಕಾರಮಯವಾಗಿರುವುದು. ಸಾಕಾಲ್ಯ ಪ್ರಣವವೇ 'ಓಂ'ಕಾರ ಸ್ವರೂಪವಾದ 'ಓಂ'ಕಾರವು ಪರಮಯೋಗಿಗಳ ಶ್ರೇಷ್ಟ ಶುದ್ದ ಮಹಾಮಂತ್ರವಾಗಿದೆ.

ಚೆನ್ನ ಬಸವಣ್ಣನ ೧೧–೧೨ನೇ ಶತಮಾನದಿಂದ ಪ್ರಾರಂಭವಾಗಿ ಉಲ್ಲೇಖಗೊಂಡ ಒಂದು ಹೊಸ ರೀತಿಯ ಸಾಹಿತ್ಯ ಕೃತಿ ಮುಂದೆ ವಿಸ್ತರತೆ ಹೊಂದುತ್ತಾ ೧೫ನೇ ಶತಮಾನದಲ್ಲಿ ಹೆಚ್ಚು ಪ್ರಚಲಿತಗೊಂಡು ಕೃತಿಗಳು ರಚಿತಗೊಂಡಿವೆ. ಆಧ್ಯಾತ್ಮದ ಆಳವಾದ ಪರಿಜ್ಞಾನವನ್ನು "ಮೈಕ್ರೊ ಅನಾಲಿಸಿಸ್" ಮೂಲಕ ಪರಿಚಯಿಸಿದ್ದು ಈ ಕವಿಯ ಹಿರಿಮೆಯು ಹೌದು. ಇಲ್ಲಿ ಸಿದ್ದಾಂಥವಿದೆ, ಸಾಧನಮಾರ್ಗವಿದೆ. ವೀರಶೈವ ಸಂದೇಶವು ಇದೆ. ಮಾನವನು ಮಹಾದೇವನಾಗುವ ಪರಿಯ ಸೂಕ್ಷ್ಮವಾದ ನೀವೇದನೆಗೆ ಈ ಕೃತಿಸಾಕ್ಷಿಯಾಗಿದೆ ಲಿಂಗಾಯಿತ ಧರ್ಮದ ಸೂಕ್ಷ್ಮಾತಿಸೂಕ್ಷ್ಮದರ್ಶನದ ದಾರ್ಷನಿಕ ಕೃತಿ, ಆದ್ಯಾತ್ಮದ ಮೇರು ಕೃತಿ,ಎಂದು ಡಾ.,ಎಸ್.ವಿ. ಅಯ್ಯನಗೌಡರು ಅಭಿಪ್ರಾಯಪಡುವರು. ಈಗಾಗಲೇ ಕನ್ನಡ ಸಾಹಿತ್ಯದಲ್ಲಿ ಏಕೋತ್ತರ ಶತಸ್ಥಲ ಕೃತಿಗಳು ಎಂಬ ತೆಲೆ ಬರಹದಲ್ಲಿ ಪಿ,ಎಚ್.ಡಿ, ಅಧ್ಯಯನ ಮಾಡಿರಬಹುದು ಎಂದು ಹೇಳುತ್ತಾರೆ ಮತ್ತು ವೀರಶೈವ ಲಘು ಸಾಹಿತ್ಯ ಪ್ರಕಾರಗಳು ಎಂಬ ತೆಲೆ ಬರಹದ ಪಿ,ಎಚ್.ಡಿ, ಪದವಿಗಾಗಿ ಕರ್ನಾಟಕ ವಿಶ್ವ ವಿದ್ಯಾನಿಲಯಕ್ಕೆ ಸಾದಾರಪಡಿಸಿದ ಸಂಶೋಧನ ಮಹಾ ಪ್ರಭಂದವನ್ನು ಸಂಶೋಧಕರಾದ ಶ್ರೀ ಆರ್,ವಿ. ಪಾಟಿಲ ಅವರ ಅಪ್ರಕಟಿತ ಕೃತಿಯಿಂದ ತಿಳಿದು ಬಂದಿದೆ.

## ಅಡಿ ಟಿಪ್ಪಣಿಗಳು

**ಅಧ್ಯಯನದ ಉದ್ದೇಶ ಸ್ವರೂಪ ವ್ಯಾಪ್ತಿ.**

೧) ಕರಣ ಹಸಿಗೆ : ಡಾ. ಶ್ರೀ ಇಮ್ಮಡಿ ಶಿವಬಸವಸ್ವಾಮಿಗಳು
ಜಗದ್ಗುರು ಶ್ರೀ ಶಿವರಾಮೇಶ್ವರ ಗ್ರಂಥಮಾಲೆ, ಮೈಸೂರು-೫೭೦೦೦೫ – ೨೦೧೦

೨) ಡಾ. ವೀರಣ್ಣ ರಾಜೂರ ಸಂ.ಫ.ಗು. ಹಳಕಟ್ಟಿ
ಸಮಗ್ರ ಸಾಹಿತ್ಯ ಸಂಪುಟ ಅನುಬಂಧ ೧, ಪುಟ ೩೭೧,
ವಚನ ಪಿತಾಮಹ ಡಾ. ಫ.ಗು.ಹಳಕಟ್ಟಿ ಸಂಶೋಧನಾ ಕೇಂದ್ರ ಬಿಜಾಪುರ, ಮು-೨೦೦೨.

೩) ಕರಣ ಹಸಿಗೆ : ಡಾ. ಶ್ರೀ ಇಮ್ಮಡಿ ಶಿವಬಸವ ಸ್ವಾಮಿಗಳು
ಕರಣ ಹಸಿಗೆಯ ಕೃತಿಯ ೨೧೨ ಪುಟ್ಟದಲ್ಲಿ ತೆಗೆದುಕೊಳ್ಳಲಾಗಿದೆ.
ಜಗದ್ಗುರು ಶ್ರೀ ಶಿವರಾಮೇಶ್ವರ ಗ್ರಂಥಮಾಲೆ, ಮೈಸೂರು-೫೭೦೦೦೫. – ೨೦೧೦

೪) ವೀರಶೈವ ಲಘು ಸಾಹಿತ್ಯ ಪ್ರಕಾರಗಳು ಇದು ಅಪ್ರಕಟಿತ ಕೃತಿ
ಸಂಶೋಧಕರು : ಆರ್.ವಿ. ಪಾಟೀಲ, ಕನ್ನಡ ವಿಷಯದಲ್ಲಿ ಪಿ.ಹೆಚ್.ಡಿ. ಪದವಿಗಾಗಿ ಕರ್ನಾಟಕ ವಿಶ್ವವಿದ್ಯಾನಿಲಯಕ್ಕೆ ಸಾದರಪಡಿಸಿದ ಸಂಶೋಧನ ಮಹಾಪ್ರಬಂಧದಲ್ಲಿ ೭೮, ೭೮, ೯೨, ೧೧೪ನೆಯ ಪುಟದಿಂದ ತೆಗೆದುಕೊಳ್ಳಲಾಗಿದೆ.

೫) ಡಾ. ವಿದ್ಯಾಶಂಕರರವರು ವೀರಶೈವ ಸಾಹಿತ್ಯ ಚರಿತ್ರೆಯ ೨೬೭ನೆಯ ಪುಟದಿಂದ ತೆಗೆದುಕೊಳ್ಳಲಾಗಿದೆ.

೬) ತೋಂಟಾದಾರ್ಯ ಮಹಾಸಂಸ್ಥಾನ ಮಠ, ಗದಗ, ಡಂಬಾಳದ ವೀರಶೈವ ಅಧ್ಯಯನ ಸಂಸ್ಥೆಯಿಂದ ೧೯೯೯ರಲ್ಲಿ ಡಾ. ಫ.ಗು.ಹಳಕಟ್ಟಿರವರ ವಚನಶಾಸ್ತ್ರ ಸಾರ ಭಾಗ-೧ರ ಪೂರ್ವಾರ್ಧ-ಉತ್ತರಾರ್ಧದ ಸಂಪುಟ ೧ರ ಪುಟ ೬೫ರಲ್ಲಿ ಡಾ. ವೀರಣ್ಣ ರಾಜುರವರ ಸಮಗ್ರ ಕೃತಿ

## ೨. ಇದುವರೆಗೂ ನಡೆದ ಅಧ್ಯಯನದ ಸಮೀಕ್ಷೆ

ಕರಣ–ಹಸಿಗೆ ಮತ್ತು ಮಿಶ್ರಾಪ್ರಣ ಹಿರಿಯ ಮುತ್ರಗೌಪ್ಯ ಪವಮಂತ್ರಗೌಪ್ಯ ೯೬ ಸಂಕೀಲಗಳು ಒಂದಕ್ಕೊಂದು ಕೊಂಡಿಯ ರೀತಿಯಾಗಿ ಸರಪಳಿಯಾಗಿ ಬೆಸೆದುಕೊಂಡ ವಿಶೇಷವಾದ ಕೃತಿ. ಚೆನ್ನಬಸವಣ್ಣನವರಿಂದ ಹಿಡಿದು ಡಾ॥ ಶ್ರೀ ಇಮ್ಮಡಿ ಶಿವಬಸವಸ್ವಾಮಿಗಳನ್ನು ಮುಂದು ಮಾಡಿಕೊಂಡು ಇದುವರೆವಿಗೂ ಸುಮಾರು ವಿದ್ವಾಂಸರು ಕರಣ ಹಸಿಗೆಯನ್ನು ಕುರಿತು ಅನೇಕ ಗ್ರಂಥ ಮತ್ತು ಲೇಖನಗಳನ್ನು ಬರೆದಿದ್ದಾರೆ. ಎಲ್ಲಿಯವರೆವಿಗೂ ಎಂದರೆ ಬಸವ ಯುಗದ ಶರಣರ ವಚನೇತರ ಸಾಹಿತ್ಯ ಸಂಪಾದಕರಾದ ಡಾ॥ ರವೀಂದ್ರನಾಥ ರವರು ಬಸವ ಸಮಿತಿ ಬೆಂಗಳೂರು ಶರಣರ ಇವರುಗಳು ಮುದ್ರಿಸಿದ್ದು, ೨೦೦೮ ರ ಬಸವ ಜಯಂತಿಯಲ್ಲಿ ಬಿಡುಗಡೆ ಮಾಡಿರುತ್ತಾರೆ. ಇಲ್ಲಿಯವರೆಗೆ ಕರಣ ಹಸಿಗೆಯ ಬಗ್ಗೆ ಅನೇಕ ರೀತಿ ಅಧ್ಯಯನಗಳು ನಡೆದಿರುತ್ತದೆ. ಫ.ಗು.ಹಳಕಟ್ಟಿಯವರ ಸಂಪುಟ –೦೬ರಲ್ಲಿ ಕರಣ ಹಸಿಗೆಯಲ್ಲಿ ಸಂಕ್ಷಿಪ್ತವಾಗಿ ಎಳೆ ಎಳೆಯಾಗಿ ಅನಾವರಣಗೊಳಿಸಿದ್ದಾರೆ. ಫ.ಗು.ಹಳಕಟ್ಟಿ ನಂತರದಲ್ಲಿ ವಚನಗಳ ಸಂಪಾದನೆಗೆ ಶಾಸ್ತ್ರೀಯ ದೀಕ್ಷೆ ನೀಡಿದವರು ಶಿ.ಶಿ.ಬಸವನಾಳರು ಬಸವಣ್ಣನವರು ಷಟಸ್ಥಲ ವಚನ ಈ ದಿಸೆಯಲ್ಲಿ ಮಹತ್ವದ ಕೃತಿ ಇವರ ಮಾರ್ಗದಲ್ಲಿ ಶ್ರಮಿಸಿದರು. ಡಾ॥ ಆರ್.ಸಿ ಹೀರೆಮಠ ಮತ್ತು ಡಾ॥ ಎಲ್.ಬಸವರಾಜು ರವರ ಕನ್ನಡ ಅಧ್ಯಯನ ಪೀಠದಲ್ಲಿ ಕನ್ನಡ ಅಧ್ಯಯನ ಪೀಠದಲ್ಲಿ ಸಮಗ್ರ ವಚನ ವಾರ್ಗಯ ಸಂಗ್ರಹ, ಸಂಸ್ಕರಣ ಪ್ರಕಟಣ ಯೋಜನೆಯ ನೇತೃತ್ವ ವಹಿಸಿಕೊಂಡು ಚೆನ್ನಬಸವಣ್ಣನವರ ವಚನಗಳು (೧೯೬೫) ರಲ್ಲಿ ಸಕಲ ಪುರಾತನ ವಚನ ವಿಶೇಷ ಅನುಭವ ಷಟಸ್ಥಲ ವೀರಶೈವ ಚಿಯಾಮಣಿ ಬ್ರಹ್ಮ ದೈವತ್ವ ಸಿದ್ದಾಂತ ಷಟಸ್ಥಲ ಭರಣ ಶಿವಗಣ ಪ್ರಾಸಾವಿ ಮಹದೇವಯ್ಯ ಹಾಗೂ ಗುಮ್ಮಾಳಪುರದ ಸಿದ್ಧಲಿಂಗದ ಶೂನ್ಯ ಸಂಪಾದನೆಗಳನ್ನು ಪ್ರಕಟಿಸಿದರು.

ಕರಣಹಸಿಗೆ ಚೆನ್ನಬಸವಣ್ಣನವರ ಕೃತಿಯೆಂದೂ ಅದೊಂದು ಗದ್ಯ ಗ್ರಂಥವಾಗಿದ್ದು, ಅದರಲ್ಲಿ ವೇದಾಂತಕ್ಕೆ ಸಂಬಂಧಿಸಿದ ಸಂಗತಿಗಳಿವೆಯೆಂದೂ ಮೊದಲು ತಿಳಿಯಪಡಿಸಿದ. ಆಧ್ಯರಲ್ಲಿ ಮುಖ್ಯರು ಕವಿ ಚರಿತ್ರೆಕಾರರು. ಆದರೆ, ಈ ಕೃತಿಯನ್ನು ಅವರು ಪರಿಷ್ಕರಿಸಿ ಪ್ರಕಟಿಸಲಿಲ್ಲ. ಆನಂತರದ ಕಾಲದಲ್ಲಿ ಈ ಕೃತಿ ವಿವಿಧ ವಿದ್ವಾಂಸರಿಂದ ಬೇರೆ ಬೇರೆ ರೀತಿಗಳಲ್ಲಿ ಪ್ರಕಾಶನಗೊಂಡಿದೆ. ಈಗಿನ ತಿಳುವಳಿಕೆಯ ಮಟ್ಟಿಗೆ ಬೆಂಗಳೂರಿನ ತಿಪ್ಪಶೆಟ್ಟಿ ಮಠದ ಚಕ್ರಮೂರ್ತಿಗಳಾಗಿದ್ದ ಮಹಾಂತ ದೇಶೀಕೇಂದ್ರರಿಂದ ಪರಿಷ್ಕರಿಸಲ್ಪಟ್ಟು ಇದು ೧೮೮೪ ರಲ್ಲಿ ಮೊದಲ ಬಾರಿಗೆ ದೇಶಿ ಪ್ರಕಾಶನಗೊಂಡಿತು. ಇದನ್ನೂ ಮಿಶ್ರಾರ್ಪಣ ಮಂತ್ರಗೋಪ್ಯ, ಘಟಚಕ್ರ ಏಕಾದಶ ಪ್ರಸಾದ ವಿಚಾರವಾಕ್ಯ, ಮಿಶ್ರಷಟ್ಸ್ಥಲ ವಚನ ಮುಂತಾದವುಗಳನ್ನೂ ಪಂಚಬ್ರಹ್ಮ ನಾರಾಯಣೋಪನಿಷತ್‌ನೊಂದಿಗೆ ಸೇರಿಸಿ ಪ್ರಕಟಿಸಿರುವುದು ಇವರ ಪರಿಷ್ಕರಣದ ಒಂದು ವಿಶೇಷ ಇಡೀ ಗ್ರಂಥದಲ್ಲಿ ನಲವತ್ತಾರು ಡೆಮ್ಮೈಪುಟಗಳಿವೆ. ಅದರಲ್ಲಿ ಕರಣಹಸಿಗೆ ಇಪ್ಪತ್ತೈದು ಶ್ಲೋಕಗಳಿಗೂ ಹೆಚ್ಚು ಪಠ್ಯ ಒಳಗೊಂಡಿದ್ದು, ಹದಿಮೂರು ಪುಟಗಳ ವ್ಯಾಪ್ತಿ ಹೊಂದಿದೆ. ಇದರಲ್ಲಿ ಮೂಲಪದ್ಯ ಮಾತ್ರವಿದೆ. ಸಂಬಂಧಿಸಿದ ಬೇರೆ ಯಾವ ವಿವರಣೆ, ಟಿಪ್ಪಣಿ, ಸಹಾಯಕ ಸಾಹಿತ್ಯ ಇಲ್ಲ. ಆದರೆ ಮೂಲಪಠ್ಯ ಮತ್ತು ಅದರಲ್ಲಿ ಬರುವ ಸಂಸ್ಕೃತ ಶ್ಲೋಕಗಳಲ್ಲಿ ಹಲವಾರು ಸಾಹಿತ್ಯಗಳು ಉಳಿದುಹೋಗಿವೆ. ಈ ಆವೃತ್ತಿ ನೋಡಲು ಇಂದು ಸುಲಭವಾಗಿ

ದೊರೆಯುವುದಿಲ್ಲ. ಕರಣ ಹಸಿಗೆಯ ಕರ್ತೃವಾದ ಚೆನ್ನಬಸವಣ್ಣನವರನ್ನು ನಿರಾಭಾರಿ ದೇಶಿಕೊತ್ತಮರೆಂದು ಇಲ್ಲಿ ವಿಶೇಷಿಸಲಾಗಿದೆ. ಒಂದು ಸಾವಿರ ಪ್ರತಿಗಳ ಇದರ ಮೊದಲ ಆವೃತ್ತಿಯನ್ನು ಬೆಂಗಳೂರಿನ ವಿಚಾರದರ್ಪಣ ಮುದ್ರಾಕ್ಷರ ಶಾಲೆಯಲ್ಲಿ ಮುದ್ರಿಸಲಾಗಿದೆ. ಅನುಸ್ವಾರ ಸಹಿತವಾದ ಬರವಣಿಗೆಯನ್ನು ಒಳಗೊಂಡಿರುವ ಶಕಟರೇಫ ಬಳಕೆಯಿಂದ ಮುಕ್ತವಾಗಿರುವ ಇದು ಹತ್ತೊಂಭತ್ತನೆ ಶತಮಾನದ ಪರಿಷ್ಕರಣ ಪದ್ಧತಿಗೆ ಅನುಗುಣವಾಗಿದೆ. ಈ ಪಠ್ಯಕ್ಕೆ ಆಧಾರವಾದ ಹಸ್ತಪ್ರತಿಯ ಅಥವಾ ಈ ಸಂಬಂಧದ ಇತರ ಯಾವುದೇ ವಿವರ ಇಲ್ಲಿ ಉಲ್ಲೇಖಗೊಂಡಿಲ್ಲ. ಇದೇ ಪಠ್ಯ ೧೯೦೮ ರಲ್ಲಿ ಬೆಂಗಳೂರಿನ ಗುರುವಣ್ಣ ದೇವರ ಮಠಾಧ್ಯಕ್ಷರಾದ ನಂಜುಂಡ ಸ್ವಾಮಿಗಳಿಂದ ಪರಿಶೋಧಿತವಾಗಿ ಶಿವಾನುಭವ ಶಾಸ್ತ್ರ ಎಂಬ ಶೀರ್ಷಿಕೆಯ ಗ್ರಂಥ ಸಂಪುಟದಲ್ಲಿ ಸೇರ್ಪಡೆಗೊಂಡಿದೆ. ಸಂಸ್ಕೃತ ಕನ್ನಡ ಈ ಎರಡೂ ಮಾನದ ಆರಂಭದ ದಿನಗಳಲ್ಲಿ ವೀರಶೈವತತ್ವ ಸಾಹಿತ್ಯ ಪಾರಂಗತರಾಗಿದ್ದರು. ವೀರದೈವಕೌಸ್ತುಭ, ಶಿವಸ್ತುತಿಮಣಿ ಮಲಾ, ಶಿವಾನುಭವಸೂತ್ರ, ಶಿವಪೂಜಾ ವಿಧಿ, ಸಟೀಕಾ ವೀರಮಾದೇಶ್ವರ ವಿಜಯ, ಇದೇ ಮೊದಲಾದ ಕೃತಿಗಳನ್ನು ಪರಿಷ್ಕರಿಸಿ ಕೊಟ್ಟಿದ್ದಾರೆ. ಪ್ರಸ್ತುತ ಕೃತಿ ಸತ್ರಂ ಚಂದ್ರಶೇಖರಯ್ಯ ಸುಬ್ರಹ್ಮಣ್ಯನವರು ಸ್ಥಳೀಯ ಶಾರದಾವಿಲಾಸ ಮುದ್ರಾಕ್ಷರ ಶಾಲೆಯಲ್ಲಿ ಮುದ್ರಿಒತವಾಗಿವೆ. ಮಿಶ್ರಾರ್ಪಣ, ಅಕ್ಕಗಳ ವಚನ, ಪ್ರಭುದೇವರ ಸೃಷ್ಟಿ ವಚನ ಬೆಂಗಳೂರು ವೀರಶೈವ ಮಠಗಳು ಒಂದು ಅಧ್ಯಯನ ಡಾ.ಬಿ.ಸಿ ವೀರಪ್ಪ ಪ್ರಕಾಶ ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು ಬೆಂಗಳೂರು ೨೦೦೧, ಪುಟ ೧೧೧-೧೧೫ ಗಳೊಂದಿಗೆ ಕರಣ ಹಸಿಗೆಯನ್ನು ಇಲ್ಲಿ ಮೊದಲನೆಯ ಕೃತಿಯಾಗಿ ಸೇರಿಸಿದೆ. ಈ ಎಲ್ಲಾ ಕೃತಿಗಳನ್ನು ಗ್ರಂಥ ಪರೀಶೋಧಕರು" ಚನ್ನಬಸವೇಶ್ವರ ಸ್ವಾಮಿಗಳಿಂದ ವಿರಚಿತಮಾದ "ಶಿವನುಭವಶಾಸ್ತ್ರ" ಎಂದು ಕರೆದಿರುವುದರ ಕಾರಣ ಹಿನ್ನೆಲೆಗಳು ಸ್ಪಷ್ಟವಾಗುವುದಿಲ್ಲ. ಏಕೆಂದರೆ ಚನ್ನಬಸವಣ್ಣನವರ ಹೆಸರಿನಲ್ಲಿ ಇಂತಹದೊಂದು ಕೃತಿಯಿಲ್ಲ. ಈ ಗ್ರಂಥ ಸಮೂಹಕ್ಕೆ ಆ ಹೆಸರು ಬರಲು ಹಸ್ತಪ್ರತಿ ಶೀರ್ಷಿಕೆ ಆಧಾರವೇ ಅಥವಾ ಅನುಭವ ವಿಷಯಕ್ಕೆ ಸಂಬಂಧಿಸಿರುವುದರಿಂದ ಈ ಕೃತಿಯನ್ನು ಇದರಲ್ಲಿ ಅಚ್ಚಾಗಿರುವ ಕರಣ ಹಸಿಗೆ ಪೀಠಿಕೆಯೊಂದಿಗೆ ೧೩೨ ಪುಟಗಳ ವ್ಯಾಪ್ತಿತಯಾಗಿದೆ. ಒಳ ಭಾಗಗಳಿದ್ದು ಅದು ೪೦ ಪಠ್ಯಗಳಾಗಿ ವಿಭಜನೆಗೊಂಡಿದೆ. ಇದರಲ್ಲಿ ಕರಣಹಸಿಗೆಯ ಮೂಲಪಠ್ಯ ಹಾಗೂ ಆ ಸಂಬಂಧದ ವ್ಯಾಖ್ಯಾನ ಮಿಶ್ರಣಗೊಂಡಿದೆ. ಉದ್ದಕ್ಕೂ ವ್ಯಾಖ್ಯಾನ ಸರಳವಾಗಿದ್ದರೂ ಅಲ್ಲಲ್ಲಿ ಮೂಲಕ ಕೆಲವು ಪದಗಳು ಅವಿದ್ಯೆಗೊಂಡಿದೆ. ಇಡೀ ಕೃತಿ ಗುರು ಶಿಷ್ಯ ಸಂವಾದ ರೂಪದಲ್ಲಿ ನಿರೂಪಣೆಗೊಂಡಿದೆ. ಕರಣ ಹಸಿಗೆಯ ಮೂಲಪಥ್ಯ ಇಲ್ಲಿ ಪ್ರತ್ಯೇಕಗೊಂಡಿದ್ದು, ಪ್ರಪ್ರಥಮವಾಗಿ ಪ್ರಾಯಃ ಇಲ್ಲೆ ಇರಬಹುದು. ದುರದೃಷ್ಟದ ಸಂಗತಿಯೆಂದರೆ ಈ ವ್ಯಾಖ್ಯಾನದ ಕರ್ತೃವಾಗು ಇದರ ಕಾಲವಾಗಲಿ. ಇದಕ್ಕೆ ಆಧಾರವಾದ ಹಸ್ತಪ್ರತಿಯ ಯಾವುದೇ ವಿವರವಾಗಲಿ ಇಲ್ಲಿ ಗ್ರಂಥ ಪರಿಶೋಧಕರಿಂದ ಉಲ್ಲೇಖಗೊಂಡಿಲ್ಲ. ಇಂಥ ಕೃತಿಗಳಿಗೆ ಸಾಮಾನ್ಯವಾಗಿ ಪರಿಷ್ಕರ್ತುರು ಸೇರಿರುವ ಅರ್ಥ ಅಥವಾ ಒಂದು ಪುಟದ ಪೀಠಿಕೆ ಕೂಡ ಇಲ್ಲಿಲ್ಲ ನಡುವಣರಲು ಈ ಪರಿಷ್ಕರ್ತರೇ ಕಾರಣರೋ ಅಥವಾ ಅವರಿಗೆ ದೊರೆತಿದ್ದ ಮೂಲ ಹಸ್ತಪ್ರತಿಯೇ ಆ ಸ್ವರೂಪದಲ್ಲಿತ್ತೊ ಈಗ ಹೇಳಲಾಗುವುದಿಲ್ಲ. ಮೂಲದಲ್ಲಿ ಪಹಚ್ಛೇದ ಮಾಡಿಕೊಂಡು ಪದಶಃ ಅರ್ಥ ಬರೆಯಲಾಗಿದೆ. ಈಗ ಪ್ರಚಲಿತವಾಗಿರುವ ಹಳಕಟ್ಟಿಯವರ ವ್ಯಾಖ್ಯಾನ ರೂಪದ ಕರಣಹಸಿಗೆ ಪಠ್ಯಕ್ಕೆ ಬಹುಶಃ ಇದೇ ಮೂಲವಾಗಿರಬಹುದು. ಏಕೆಂದರೆ, ಅವರೂ ಕೂಡ ಕರಣ ಹಸಿಗೆಯನ್ನು ಪ್ರತ್ಯೇಕಿಸದೇ ಕೆಲವೆಡೆ ವ್ಯಾಖ್ಯಾನ ಸಮೇತವಾಗಿಯೇ

ಅದನ್ನು ಅಚ್ಚಿರಿಸಿರುವುದು ಈ ಅನುಮಾನಕ್ಕೆ ದಾರಿ ಮಾಡಿಕೊಡುತ್ತದೆ. ಈ ವ್ಯಾಖ್ಯಾನ ರೂಪದ ಕರಣಹಸಿಗೆ ಹಳಕಟ್ಟಿಯವರು ಈ ಕೃತಿಯನ್ನು ತಮ್ಮ ವಚನ ಶಾಸ್ತ್ರಸಾರದ ಎರಡನೆಯ ಭಾಗದಲ್ಲಿ ಸೇರ್ಪಡೆಗೊಳಿಸಿದ್ದಾರೆ. ಅವರು ಷಟ್ಸ್ಥಲ ವಚನಗಳೊಂದಿಗೆ ಇದನ್ನೂ ಸೇರಿಸಿ ೧೯೩೩ ರಲ್ಲಿ ಶಿವಾನುಭವ ಗ್ರಂಥ ಮಾಲೆಯಿಂದ ಪ್ರಕಟಿಸಿದ್ದಾರೆ. ಸೃಷ್ಟಿಯ ರಚನೆ, ಕರಣ ಹಸಿಗೆ ಕ್ರಿಯೆಗಳು ಮತ್ತು ಸಕೀಲಗಳು, ಷಟ್ಸ್ಥಲಗಳು ಮತ್ತು ಏಕೋತ್ತರ ಶತಸ್ಥಲ ಹೀಗೆ ಐದು ಭಾಗಗಳಾಗಿ ವಿಂಗಡಿಸಿ ಪ್ರಕಟಿಸಿದ್ದಾರೆ. ಹೀಗಾಗಿ ಕರಣ ಹಸಿಗೆ ಇದರ ಎರಡನೇ ಭಾಗವಾಗಿದೆ. ಇದನ್ನು ಪ್ರಸ್ತಾಪಿಸುತ್ತಾ ಅವರು ಈ ವಿಷಯವಾಗಿ ನಮಗೆ ದೊರೆತ ಗ್ರಂಥಗಳು ಐದು ಮಾತ್ರ. ಅವುಗಳನ್ನು ರಚಿಸಿದವರ ಹೆಸರುಗಳು ನಮಗೆ ತಿಳಿದಿರುವುದಿಲ್ಲ. ಆದರೆ ಚೆನ್ನಬಸವಣ್ಣನವರು ಕರಣಹಸಿಗೆ ಪದ್ಧತಿಯನ್ನೇ ಅವೆಲ್ಲವೂ ಮುಖ್ಯವಾಗಿ ಅವಲಂಬಿಸಿರುತ್ತದೆ. ಆದರೆ ಕರಣ ಹಸಿಗೆ ಅವುಗಳಲ್ಲಿನ ವಿಷಯಗಳು ಮಹತ್ವವಲ್ಲದ ಪುನರುಕ್ತಿಗಳಿದ್ದು ಬಹಳ ಕೂಡಿಕೊಂಡಿರುತ್ತದೆ. ಆದ್ದರಿಂದ ಇಂತಹ ಅನಾವಶ್ಯಕ ಭಾಗಗಳನ್ನು ತೆಗೆದು ಹಾಕಿ ಮುಖ್ಯವಾದ ಭಾಗಗಳನ್ನು ಮತ್ರ ವಚಕರ ಎದುರಿಗೆ ನಾವು ಇಲ್ಲಿ ಇಟ್ಟಿರುತ್ತೇವೆ. ಎಂದಿದ್ದಾರೆ. ಮತಿನಿಂದ ಇವರಿಗೆ ದೊರೆತಿದ್ದ ಕೃತಿ, ಪ್ರತಿ ಪದಾರ್ಥ ನಿರೂಪಣೆಯಿದ್ದ ಮೂಲ ಪಠ್ಯದಿಂದ ಬೆಲೆಯಿಲ್ಲದ ವಿವರಣ ರೂಪದ ಕರಣಹಸಿಗೆಯೇ ಹೊರತು ವ್ಯಾಖ್ಯಾನರಹಿತವಾದ ಚನ್ನಬಸವಣ್ಣನವರು ಮೂಲ ಪಠ್ಯದ ಕರಣಹಸಿಗೆ ಅಲ್ಲ ಎಂಬುದು ಸ್ಪಷ್ಟವಾಗಿರುತ್ತದೆ. ಎಂದರೆ ಪ್ರಸ್ತುತ ಈ ಪರಿಷ್ಕರಣದಲ್ಲಿ ಸೇರ್ಪಣೆಗೊಪಂಡಿರುವ ವ್ಯಾಖ್ಯಾನ ರೂಪವೇ ಅದಾಗಿದ್ದಿತು ಎಂಬುದು ಖಚಿತವಾಗುತ್ತದೆ. ಮೂಲಪಠ್ಯ ಮಾತ್ರ ದೊರೆತಿದ್ದವು. ಅವರು ಇಲ್ಲಿ ಪುನರುಕ್ತಿಯಿದೆ ಎಂಬ ವಿವರಣೆಯನ್ನು ಕೊಡುತ್ತಿರಲಿಲ್ಲ. ಹೀಗಾಗಿ ಹಳಕಟ್ಟಿಯವರ ಪರಿಷ್ಕರಣವು ಮೂಲಪಠ್ಯವನ್ನು ಅದಕ್ಕೆ ಅಜ್ಞಾನ ಕರ್ತೃ ಒಂದೆರಡು ವಚನಗಳನ್ನು ಸೇರಿಸಿಕೊಂಡು ಪ್ರಕಟವಾಗಿರುವ ಮಿಶ್ರರೂಪದ ಕರಣಹಸಿಗೆಯಾಗಿದೆ. ೧೮೮೪ ರ ಆವೃತ್ತಿಗೂ, ಹಳಕಟ್ಟಿಯವರ ಆವೃತ್ತಿಗೂ ವಿಷಯಾನುಕ್ರಮಣಿಕೆಯಲ್ಲಿ ಗೌಣವೆನ್ನಬಹುದಾದ ಕೆಲವು ವ್ಯತ್ಯಾಸಗಳಿವೆ. ಹಳಕಟ್ಟಿಯವರು ಇಡೀ ಕೃತಿಯನ್ನು ದೇಹದ ಜ್ಞಾನ ಹಾಗೂ ಮನುಷ್ಯನ ದುರ್ವ್ಯಾ ಪಾತಗಳ ವಿವರಣೆ ಎಂದು ಎರಡು ಭಾಗ ಮಾಡಿರುವರು. ಇದು ೧೮೮೪ ರ ತಿಪ್ಪಶೆಟ್ಟಿ ಮಠದ ಆವೃತ್ತಿಯಲ್ಲಿಲ್ಲ. ಹಳಕಟ್ಟಿಯವರೇ ಆ ವ್ಯಕ್ತಿಯ ಬಳಿ ಶೀರ್ಷಿಕೆಗಳಲ್ಲೂ ಸ್ಥಳ ಪಲ್ಲಟ, ಶೀರ್ಷಿಕಾ ವ್ಯತ್ಯಾಸಗಳಿವೆ. ಅಲ್ಲದೆ ನಡುನಡುವೆ ವಚನಗಳೇ ಸೇರಿಹೋಗಿವೆ. ಅವರ ಆವೃತ್ತಿಯನ್ನು ಹೀಗೇತಾಯಿತೆಂಬುದು ತಿಳಿಯದು. ಈ ಎಲ್ಲಕ್ಕಿಂತ ಮಿಗಿಲಾಗಿ ಕರಣಹಸಿಗೆಯೊಡನೆ ಲಿಂಗಾಂಗ ಸಾಮರಸ್ಯ ಎಂಬ ಶೀರ್ಷಿಕೆಯೊಂದಿಗೆ ಮೂರನೆಯ ವಿಭಾಗವನ್ನು ಮಾಡಿಕೊಂಡು ವಚನಗಾರರು ಆಯ್ದ ವಚನಗಳನ್ನು ಅವರು ಸಂಕಲಿಸಿದ್ದಾರೆ. ಈ ವಚನಗಳು ಕರಣಹಸಿಗೆಯಲ್ಲಿ ನಿರೂಪಿತವಾಗಿರುವ ವಿವರಗಳಿಗೆ ಸಂಬಂಧಿಸಿದ್ದವು. ಇವು ಮೂಲ ಪಠ್ಯದ ಭಾಗಗಳಲ್ಲಿ ಕರ್ನಾಟಕ ವಿಶ್ವವಿದ್ಯಾಲಯ ೧೯೬೫ ರಲ್ಲಿ ಚಕ್ರವರ್ತಿ ಚನ್ನಬಸವಣ್ಣನವರು ವಚನಗಳು ಎಂಬ ಬೃಹತ್ ಸಂಪುಟದಲ್ಲಿ ಡಾ.ಆರ್.ಸಿ.ಹಿರೇಮಠದ ಸಂಪಾದಕತ್ವದಲ್ಲಿ ಪ್ರಕಟಿಸಿದೆ. ಈಕೃತಿಯ ಕೊನೆಯಲ್ಲಿ ಚೆನ್ನಬಸವಣ್ಣನವರ ಇತರ ಸಾಹಿತ್ಯವನ್ನು ಸೇರಿಸುವಾಗ ೧೬ ಪುಟಗಳಲ್ಲಿ ಕರಣಹಸಿಗೆಯನ್ನು ಮೊದಲ ಗ್ರಂಥವಾಗಿ ಸೇರ್ಪಡೆಗೊಳಿಸಲಾಗಿದೆ. ಚೆನ್ನಬಸವಣ್ಣನವರ ಮೂಲಪಠ್ಯ ಪ್ರತ್ಯೇಕವಾಗಿ ಇಲ್ಲಿ ಅಚ್ಚಾಗಿವೆ. ಪದಚ್ಛೇದ ಪಠ್ಯದೊಂದಿಗೆ ಬಳಕೆ. ಈಕೃತಿಯಲ್ಲಿ ಮೊದಲ ಬಾರಿಗೆ ಆಗಿದೆ. ಓದಲು ಅನುಕೂಲವಾಗುವಂತಹ ಸ್ಪಷ್ಟ ವಿಭಾಗಗಳಿರುವ ಒಟ್ಟು ನಲವತ್ತು ಒಳ ಶೀರ್ಷಿಕೆಗಳಿವೆ.

ಮೂಲ ಪಠ್ಯದಲ್ಲಿ ಬಂದಿರುವ ಶ್ಲೋಕಗಳಿವೆ. ಶುದ್ಧ ಪಾಠ ನೀಡುವ ಪ್ರಯತ್ನವಿದ್ದರೂ ಪ್ರಾರಂಭದ ಕೆಲವು ಶ್ಲೋಕಗಳಲ್ಲಿ ಸಾಹಿತ್ಯಗಳು ಉಳಿದುಹೋಗಿವೆ. ವ್ಯಾಖ್ಯಾನವು ಇಲ್ಲಿ ಯಾವ ರೀತಿಯಲ್ಲೂ ಎಡೆ ಪಡೆದಿಲ್ಲ. ಇವರ ಆಧಾರ ಪ್ರತಿಗಳ ವಿವರ ಸಂಪಾದನೆಯ ವಿಧಾನ ಮುಂತಾದವನ್ನು ನೀಡದಿರುವುದು ಇಲ್ಲಿಯ ದೊಡ್ಡ ಕೊರತೆ. ೧೯೭೨ ರಲ್ಲಿ ಪಂಡಿತ ನಾಗಭೂಷಣ ಶಾಸ್ತ್ರಿಗಳು ಧಾರವಾಡದ ಮುರುಘಾ ಮಠದಿಂದ ಕರಣಹಸಿಗೆಯನ್ನು ಸ್ವತಂತ್ರವಾಗಿ ಪ್ರತ್ಯೇಕವಾಗಿ ಪ್ರಾಯಃ ಮೊದಲ ಬಾರಿಗೆ ಅಚ್ಚು ಮಾಡಿಸಿದ್ದಾರೆ. ಇದಕ್ಕೆ ದೀರ್ಘವಾದ ಪ್ರಸ್ತಾವನೆ ಬರೆದಿದ್ದಾರೆ. ಇದರಲ್ಲಿ ಕರಣಹಸಿಗೆ ಕುರಿತಮ್ತೆ ಹತ್ತು ಪುಟಗಳಲ್ಲಿ ವಿವರಣೆ ಇದೆ. ವಿಶೇಷವಾಗಿ ವೀರಶೈವ ಷಟ್ಸ್ಥಲ ಸಿದ್ಧಾಂತವನ್ನು ಇದಕ್ಕೆ ಹಿನ್ನಲೆಯಾಗಿ ವಿವರಿಸಿದ್ದಾರೆ. ಒಳವಿಭಾಗಗಳೊಂದಿಗೆ ಮೂಲಪಠ್ಯ ಮಾತ್ರ ಇದರಲ್ಲಿ ಅಚ್ಚಾಗಿದೆ. ಮುದ್ರಿಸಲು ಬಳಸಿದ ಆಧಾರ ಸಾಹಿತ್ಯದ ಬಗ್ಗೆ ಯಾವುದೇ ಉಲ್ಲೇಖಗಳಿಲ್ಲ. ಶಕಟರೇಫದ ಬಳಕೆ ಇಲ್ಲೂ ಆಗಿದೆ. ಈಚೆಗೆ ೧೯೯೯ ರಲ್ಲಿ ಗದುಗಿನ ತೋಂಟದಾರ ಸಂಸ್ಥಾನ ಮಠದ ವೀರಶೈವ ಅಧ್ಯಯನ ಸಂಸ್ಥೆಯಿಂದ ಹಳಕಟ್ಟಿಯವರ ವಚನಶಾಸ್ತ್ರಕಾರ ಭಾಗ–೧ ಪೂರ್ವಾರ್ಧ ಉತ್ತರಾರ್ಧವನ್ನು ಪ್ರೊ.ವಿ.ವಿ.ಸಂಗಮದ ಡಾ॥ಚೆನ್ನಬಸವ ಮಹಾಸ್ವಾಮಿಗಳು ಡಾ॥ವೀರಣ್ಣರಾಜಣ್ಣರ ಹಾಗೂ ಶ್ರೀ ಬಸವರಾಜಪ್ಪನವರು ಸೇರಿ ಪರಿಷ್ಕರಿಸಿ ಒಂದೆರೆಡು ವ್ಯತ್ಯಾಸಗಳೊಡನೆ ಪುನರ್ಮುದ್ರಿಸಿದ್ದಾರೆ. ಇದರಲ್ಲಿ ಒಟ್ಟು ನಾಲ್ಕು ಭಾಗಗಳಿವೆ. ಇಪ್ಪತ್ತೊಂದು ಅನುಬಂಧಗಳಿವೆ. ಏಳನೆಯ ಭಾಗವಾಗಿ ಕರಣಹಸಿಗೆಯನ್ನು ಪುಟ ಐವತ್ತೊಂದರಿಂದ ತೊಂಭತ್ತೊಂಭತ್ತರವರೆಗೆ ಮುದ್ರಿಸಿದೆ. ಹಳಕಟ್ಟಿಯವರು ಹಿಂದೆ ಮಾಡಿದಂತೆ ಇಲ್ಲಿಯೂ ಮೂಲ ಪಠ್ಯಕ್ಕೆ ಸಂಬಂಧಿಸಿದ ಲಿಂಗಾಂಗ ಸಾಮರಸ್ಯ ಭಾಗವನ್ನು ಯಥಾವತ್ತಾಗಿಜ ಸೇರ್ಪಡೆಗೊಳಿಸಿದ್ದಾರೆ. ಹಳಕಟ್ಟಿಯವರ ಮೂಲ ಕೃತಿಯ ರೂಪಕ್ಕೆ ಯಾವುದೇ ವ್ಯತ್ಯಾಸ ಬಾರದಂತೆ ಪ್ರಕಟಿಸಬೇಕೆನ್ನುವುದು ಶ್ಲೋಕಪಠ್ಯ ಹಾಗೂ ವ್ಯಾಖ್ಯಾನ ಭಾಗಗಳಲ್ಲಿರುವ ಸಾಖಿತ್ಯಗಳು, ದೋಷಗಳು ಹೆಚ್ಚಾಗಿ ಉಳಿದಿದೆ. ಅವನ್ನು ಇಲ್ಲಿ ತಿದ್ದಬಹುದಾಗಿತ್ತು. ಹಳಕಟ್ಟಿಯವರ ಪರಿಷ್ಕರಣದಲ್ಲಿದ್ದ ಸಮಸ್ಯೆ, ಸ್ಖಾಲಿತ್ಯಗಳು ಇಲ್ಲಿಯೂ ಮುಂದುವರೆದಿದೆ. ಸಂಪಾದಕರು ಅನುಬಂಧ ಒಂದರಲ್ಲಿ ನೀಡಿರುವ ವಿವರಗಳು ಕರಣಹಸಿಗೆಗೆ ಮಾತ್ರವೇ ಸಂಬಂಧಿಸಿರುವುದಿಲ್ಲ.

- ಮೊದಲನೆಯದಾಗಿ ೧೫ನೆಯ ಶತಮಾನ ನೂರೊಂದು ವಿರಕ್ತರ ಕಾಲದಲ್ಲಿ ವಚನ ಸಾಹಿತ್ಯವನ್ನು ಹುಡುಕುವ ಮತ್ತು ಕರಣಹಸಿಗೆಯನ್ನು ಕೂಡಿ ಹಾಕುವ ಟೀಕೆ ಟಿಪ್ಪಣಿ ಬರೆದು ಶಾಸ್ತ್ರೀಯವಾಗಿ ಸಂಕೇರಿಸುವ ಕಾರ್ಯ ಶ್ರದ್ದೆ, ನಿಷ್ಠೆ, ಅವಧಾನಗಳಿಂದ ನೆರವೇರಿತು. ಇವರ ಪರಿಣಾಮವಾಗಿ ಮಹಾಲಿಂಗದೇವರ ೧೪೨೫ ಜಕ್ಕಣಚಾರ್ಯರ (೧೪೩೦) ಗುಬ್ಬಿಮಲ್ಲಸಾರ್ಥಕ (೧೪೩೦) ಕಲ್ಕಟದ ಪ್ರಭುದೇವರ ಕರಸ್ಥಲ ವೀರಣ್ಣೊಡೆಯ (೧೪೩೦) ಕರಸ್ಥಲ ಮಲ್ಲಿಕಾರ್ಜುನ (೧೪೩೦) ಶಿವಗಣಪ್ರಸದಿ ಮಹಾ (೧೯೩೦) ಮೊದಲಾದವರಿಂದ ಈ ಕ್ಷೇತ್ರದಲ್ಲಿ ಕೃಷಿ ನಡೆಯಿತು.
- ಎರಡನೆಯದಾಗಿ ಏಳನೂರೊಂದು ವಿರಕ್ತರ ಕಾಲದಲ್ಲಿ ತೋಟದ ಸಿದ್ದಲಿಂಗೇಶ್ವರರು ಸ್ವತಃ ವಚನಗಳನ್ನು ಬರೆದಿದ್ದಲ್ಲದೆ ಅವರಲ್ಲಿ ಕರಣಹಸಿಗೆ ಸಂಬಂಧಿಸಿದ ಅನೇಕ ವಚನಗಳನ್ನು ಬರೆದಿದ್ದಾರೆ. ಅವುಗಳನ್ನು ತಾವೇ ಷಟಸ್ಥಲ ಅನುಕ್ರಮವಾಗಿ ಜೋಡಿಸಿ ಷಟ್ಸ್ಥಲ ಜ್ಞಾನ ಸಾರಾಮೃತ ಎಂಬ ನಾಮಕರಣ ಮಾಡಿದ್ದರು. ಮುಂದೆ ಇವರ ಶಿಷ್ಯ –

ಪ್ರಶಿಷ್ಯ ಪರಂಪರೆ ಈ ಕ್ಷೇತ್ರದಲ್ಲಿ ಒಂದು ಧಾರ್ಮಿಕ ಕಾರ್ಯವೆಂಬಂತೆ ವಚನ ಸಾಹಿತ್ಯವನ್ನು ಪೂರೈಸಿಕೊಂಡು ಹೋಗುತ್ತಾರೆ. ಇದರಿಂದಾಗಿ ಈ ಅವಧಿಯಲ್ಲಿ ಸಂವಹನ ಸಮಯವೆಂದು ಗುರುತಿಸಲಾಗಿತ್ತು. ಸಂಪಾದನೆಯ ಚೆನ್ನಜಯದೇವ, ಸಂಪಾದನೆಯ ಸಿದ್ಧವೀರಣ್ಣ, ಸಂಪಾದನೆಯ ಚೋಳ ಬಸವ, ಸಂಪಾದನೆಯ ಪರ್ವತೇಶ, ವಿಮಪಲಯ ಗುರು ಶಾಂತದೇವ ಸಂಪಾದನೆಯ ಗುರುಲಿಂಗದೇವ, ಸಂಪಾದನೆಯ ವೀರಸಂಗಯ, ಸಂಪಾದನೆಯ ಡುರಿ ಸಂಗಯ್ಯ ಸಂಕಲನಾಕಾರರು ಹಾಗೂ ಮುಂತಾದ ಗುಮ್ಮಳ ಪುರದ ಸಿದ್ಧಲಿಂಗ ಗೂಳೂರು ಸಿದ್ದವೀರೋಣ್ಯ ಒಡೆಯ ಹಲಗೆಯರದಿಂದ ಶೂನ್ಯ ಸಂಪಾದನೆ ರಚನೆಯಾದವು. ಹೀಗೆ ನೂರೊಂದು ಹಾಗೂ ಏಳನೂರೊಂದು ವಿರಕ್ತ ಪರಿಶ್ರಮದಿಂದಾಗಿ ವಚನ ಸಾಹಿತ್ಯದ ಒಟ್ಟು ಅಧ್ಯಯನ ಸಂಗ್ರಹ, ಸಂಕಲನ, ಸಂಪಾದನೆ ರೀತಿಯ ವ್ಯಾಖ್ಯಾನ ರೂಪಗಳಲ್ಲಿ ನೆರವೇರಿತು.

- ಮೂರನೆಯದಾಗಿ ಆಧುನಿಕ ಕಾಲದಲ್ಲಿ ಹಳಕಪ್ತಿಯವರಿಂದ ಪೂರ್ವದಲ್ಲಿ ದೇಶಿ ವ್ಯಾಪಾರಿಗಳಾದ ಶೆಟ್ಟರಿಂದ ವಚನ ಪ್ರಕಟಣ ಕಾರ್ಯ ನೆರವೇರಿತು. ಅದರ ಫಲವಾಗಿ ಬಳ್ಳಾರಿ ಶೆಟ್ಟರಿಂದ ಶಿವರತ್ನ ಪ್ರಕಾರ (೧೮೮೩) ಸಿದ್ಧೇಶ್ವರ ವಚನಗಳು (೧೮೮೫) ನಿಖಲರ ವಚನ (೧೮೮೫) ಅಖಂಡೇಶ್ವರ ವಚನ (೧೮೯೫) ಬಸವೇಶ್ವರ ವಚನಗಾರರು (೧೮೯೯) ಅಂಬಿಗರ ಪಪಯ್ಯನವರ ವಚನಶಾಸ್ತ್ರವು ೧೯೦೫ ಬಸವಲಿಮ್ಗದೇವರ ಕನ್ನಡ ವೀರಶೈವ ಸಿದ್ದಾಂತ ವಚನ (೧೯೦೭) ಮುಕ್ತಾಂಗನ ಕಂಠಮಾಲೆ ಆ ಜ್ಯೋತಿರ್ಮಯ ಶಾಂಭವಿ (೧೯೦೭) ಸಟೀಕಾ ಗಣಭಾಷಿತ ರತ್ನಮಲೆ (೧೯೦೯) ಚನ್ನಬಸವಣ್ಣನವರ ವಚನ (೧೯೧೪) ಕೃತಿಗಳ ಬೆಳಕನ್ನುಕಂಡವು. ಕರ್ನಾಟಕ ಕವಿ ಚರಿತ್ರೆಯ ಭಾಗ ೧–೨ ರ ಮೂಲಕ ಆರ್. ನರಸಿಂಹಚಾರ್ ಅವರು ಅರವತ್ತು ಜನವಚನಕಾರರನ್ನು ಅವರ ಜೀವನ ಹಾಗೂ ವಚನಗಳಿಂದ ಪರಿಚಯಿಸುತ್ತಾರೆ. ಇವರೇ ಮುಂದೆ ಫ.ಗು ಹಳಕಟ್ಟಿಯವರ ವಚನಶಾಸ್ತ್ರ ಸಾರವನ್ನು ಬಳಸಿಕೊಂಡು ಕವಿಚರಿತ್ರೆ ಭಾಗ–೨ ರಲ್ಲಿ ೨೪೩ ಜನ ವಚನಕಾರರ ಪಟ್ಟಿಯನ್ನು ನೀಡಿದ್ದಾರೆ.

ಡಾ. ಎಂ.ಎಸ್.ಸುಂಕಾಪುರ ಅವರು ಹಾಗೂ ಸಕಲ ಪುರಾತನದ ಬೆಡಗಿನ ವಚನಗಳು ಬಾಲಯ್ಯನ ವಚನಗಳು ಪದಮಮೂಲಜ್ಞಾನ ಷಟ್‌ಸಥಿಲ ಪ್ರಸಾದಿ ಸ್ಥಲದಿಂದ ವಚನಗಳು ಲಿಂಗ ಬೆದ್ರೆಮೃತ ಬ್ರೋದೆ ಗ್ರಂಥಗಳನ್ನು ಸಂಪಾದಿಸಿಕೊಟ್ಟರು. ಡಾ.ಎಲ್.ಬಸವರಾಜು ಅವರ ಅಲ್ಲಮನ ವಚನ ಚಂದ್ರಿಕ (೧೯೬೨) ಅಕ್ಕನ ವಚನಗಳು (೧೯೬೬) ಜೇಡರ ದಾಸಿಮಯ್ಯನ ವಚನಗಳು (೧೯೭೦) ಮುಂತಾದವುಗಳನ್ನು ಸುದೀರ್ಘ ಪ್ರಸ್ತವನೆಗಳೊಂದಿಗೆ ಸಂಪಾದಿಸಿದರು. ಇವರಲ್ಲದ ಚನ್ನಪ್ಪ ಸಂ.ಶಿ ಭೂಸನೂರ ಉತ್ತಂಗಿ ಮಠದ ಎಂ.ಎಸ್.ಹುಣಿ ಶ್ಯಾಳ ವೀರು, ಕೊಪ್ಪಳ ಹೆಚ್.ದೇವಿರಪ್ಪ ಸಿ.ಕೆ.ಪರಶುರಾಮ, ಬಿ.ಸಿ.ಜವಳಿ, ಹೆಚ್.ಪಿ.ಮಲ್ಲೇದೇವರು, ಬಿ.ಎಸ್.ಸಣ್ಣಯ್ಯ, ಮುಂತಾದವರನ್ನು ಈ ಕ್ಷೇತ್ರದಲ್ಲಿ ಸ್ಮರಿಸಿಕೊಳ್ಳಬಹುದಾಗಿದೆ.

ಬಸವನಾಳರ ಪರಂಪರೆಯನ್ನು ಮುಂದುವರೆಸಿಕೊಂಡು ಬಂದವರಲ್ಲಿ ಡಾ.ಎಂ.ಎಂ.ಕಲಬುರ್ಗಿ, ಎಸ್.ವಿದ್ಯಾಶಂಕರ, ಡಾ.ಶಿವನಂದ ವಿರಕ್ತಪುರ, ಡಾ.ಬಿ.ವಿ.ಶಿರೂರರು,

ಶ್ರೀ ಪಿ.ಎಂ.ಗಿರಿರಾಜು ಡಾ॥ವೀರಣ್ಣಕುಮಾರ, ಡಾ॥ ಬಿ.ಆರ್.ಹಿರೇಮಠ, ಶ್ರೀ ಎಸ್.ಶಿವಣ್ಣ, ಶ್ರೀ ಎಸ್.ಉಮಾಪತಿ, ಡಾ.ವಿ.ವಿ.ಮಲ್ಲಾಪುರ ಅವರುಗಳು ವಚನ ಸಾಹಿತ್ಯವನ್ನು ವಿವಿಧ ದೃಷ್ಟಿಕೋನಗಳಲ್ಲಿ ವಿಶ್ಲೇಷಿಸುವ ಕೆಲಸ ಮಾಡಿದ್ದಾರೆ.

ಚಿತ್ರದುರ್ಗದ ಬ್ರಹರ್ನಠ, ಹುಬ್ಬಳ್ಳಿಯ ಮೂರು ಸಾವಿರ ಮಠ, ಗದಗಿನ ತೋಟಾದಾರ್ಯ ಮಠ, ಬೆಳಗಾವಿಯ ನಾಗನೂರು ರುದ್ರಾಕಷಿಯ ಮಠ, ಬೆಂಗಳೂರಿನ ಸರ್ವಭಾಷಣ ಶಿವಯೋಗೀಶ್ವರರ ಸುತ್ತೂರು ಮಠ, ಸಂಸ್ಥಾನ ಮಠ ಶಿರಿಗೇರಿಯ ತರಳುಬಾಳುಮಠ, ಮುಂತಾದವುಗಳಲ್ಲದೆ ಬಸವ ಸಮಿತಿ, ಕನ್ನಡ ಸಾಹಿತ್ಯ ಪರಿಷತ್ತುಗಳಂತಹ ಸಾರ್ವಜನಿಕ ಸಂಸ್ಥೆಗಳಲಿ ್ಲಈ ಕಾರ್ಯ ನೆರವೇರಿತು. ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ವತಿಯಿಂದ ಡಾ॥ ಎಂ.ಎಂ. ಕಲಬುರ್ಗಿಯವರ ಪ್ರಧಾನ ಸಂಪಾದಕತ್ವದಲ್ಲಿ ಸಮಗ್ರ ವಚನ ಸಾಹಿತ್ಯದ ಜನಪ್ರಿಯ ಆವೃತ್ತಿಯ ೧೪ ಸಂಪುಟಗಳು ಪ್ರಕಟಗೊಂಡವು.

ಶಿವಶರಣದ ಆಚರಣೆಗಳಾದ ಷಟ್ಸ್ಥಲ ಅಷ್ಟಾವರಣ ಪಂಚಾಚಾರ, ಶಿವಯೋಗ, ಕಾಯಕ, ದಾಸೋಹ ಕುರಿತಂತೆ ವಚನಗಳನ್ನಾಧರಿಸಿ ಅವುಗಳ ಸ್ವರೂಪ ಮಹತ್ವವನ್ನು ವಿವರಿಸುವಲ್ಲಿ ಎದ್ದು ಕಾಣುವ ಕೃತಿಗಳೆಂದರೆ ಆರ್.ಸಿ.ಹೀರೇಮಠರ ಷಟ್ಸ್ಥಲ ಪ್ರಭೆ, ಮಹಾಯಾತ್ರೆ, ಡಾ॥ ತಿಪ್ಪರುರಾಸ್ವಾಮಿಯವರ ವಚನಗಳಲ್ಲಿ ವೀರಶೈವ ಧರ್ಮ, ಆರ್ ಆರ್.ದಿವಾಕರ ರವರ ಅನುಭವ, ಅನುಭೂತಿ, ವಚನಶಾಸ್ತ್ರ ರಹಸ್ಯ, ಎಂ.ಆರ್.ಶ್ರೀನಿವಾಸಮೂರ್ತಿ ಅವರ ವಚನ ಧರ್ಮಸಾರ ಮುಂಡರಗಿ ಅನ್ನಧಾನೀಶ್ವರ ಸ್ವಾಮಿಗಳ ಷಟ್ಸ್ಥಲ. ಒಂದು ಅಧ್ಯಯನ ಡಾ॥ ಎಂ.ಎಂ.ರವರು ಸಂಪಾದಿಸಿದ ಶಿವಶರಣರ ಕಾಯಕ ಸಿದ್ಧಾಂತ ಶಿ.ಶಿ.ಬಸವನಾಳರ ವೀರಶೈವ ತತ್ವ ಪ್ರಕಾರ ಮುಂತದವುಗಳನ್ನು ಗಮನಿಸಬಹುದು.

ಡಾ॥ ಬಿ.ವಿಶಿರೂರು ಸಂ.ಗೌರವ ಅಭಿನಂದನಾ ಗ್ರಂಥದ ಅವರದೇ ಕರಣಹಸಿಗೆ ಲೇಖನದಲ್ಲಿ ಕರಣಹಸಿಗೆಯನ್ನು ಕುರಿತು ಸ್ಥೂಲ, ಸೂಕ್ಷ್ಮ ಕಾರಣನಾಗಿ ಇಪ್ಪತ್ತೈದು ಇಂದ್ರಿಯ ಉತ್ಪತ್ತಿಯನ್ನು ಜ್ಞಾನೇಂದ್ರಿಯಗಳು, ಕರ್ಮಯೆಯಗಳನ್ನು ಬುದ್ದೆಂದ್ರಿಯಗಳನ್ನು ಇವರ ಲೇಖನದಲ್ಲಿ ಸೂಕ್ಷ್ಮ ಅಲೆ ಸೂಕ್ಷ್ಮವಾಗಿ ಮಾರ್ಮಿಕವಾಗಿ ವ್ಯಕ್ತಪಡಿಸಿದ್ದಾರೆ. ಅದರ ಸಂಖ್ಯೆ: ೨೮೪ ವೀರಶೈವ ಅಧ್ಯಯನ ಸಂಸ್ಥೆ ಜಗದ್ಗುರು ತೋಂಟದಾರ್ಯ ಮಹಾಸಂಸ್ಥಾನಮಠ ಗದಗ (೧೯೮೬)

ಎಸ್.ವಿ.ಅಯ್ಯನಗೌಡ ನವರ ಮೈಲಾರ ಬಸವಲಿಂಗ ಶರಣರ ಜೀವನ ಹಾಗೂ ಸಮಗ್ರ ಕೃತಿ ದರ್ಶನ ಪುಟ ೨೩೭ ರಿಂದ ೨೩೮ ನೋಡಿರಿ. ಈ ಗ್ರಂಥದಲ್ಲಿ ಹಸಿಗೆಯನ್ನು ಸ್ಥೂಲ ಸೂಕ್ಷ್ಮ ಕಾರಣ ಒಳಗೊಂಡ ಅಂತರ್ಮುಖಿಯಾಗಿ ಕರಣಹಸಿಗೆಯನ್ನು ಅಭಿವ್ಯಕ್ತಗೊಳಿಸಿದ್ದಾರೆ.

೧೯೯೭ ರಲ್ಲಿ ಡಾ. ಆರ್.ಸಿ. ಹಿರೇಮಠ ಮಹಾಯಾತ್ರೆ ದಶವಾಯಿ ಪುಟ ಸಂಖ್ಯೆ: ೨೪೬ ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪೆ ಈ ಮಹಾಯಾತ್ರೆಯ ಕೃತಿಯಲ್ಲಿ ಕುರಿತು ವಿಶೇಷವಾಗಿ ಅಭಿವ್ಯಕ್ತಗೊಂಡಿದೆ. ೧೯೮೨ ರಲ್ಲಿ ಚಿತ್ರದುರ್ಗದ ಮುರಘರಾಜೇಂದ್ರ ಬ್ರಹನ್ ಮಠದ ವತಿಯಿಂದ ಸಂಪಾದಕರಾದ ಡಾ॥ಎಲ್ ಬಸವರಾಜು "ವೀರಶೈವ ತತ್ವ ಮತ್ತು ಆಚರಣೆ

ಎಂಬ ಪುಸ್ತಕದಲ್ಲಿ ಪುಟ ೫೨ ರಲ್ಲಿ ಲಿಂಗಾಂಗ ಸಮರಸ್ಯವನ್ನು ಕುರಿತು ಷಟ್‌ಸ್ಥಲದ ಹಂತ ಹಂತವಾದ ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗೆ, ಶರಣ, ಐಕ್ಯ ಸ್ಥಳಗಳನ್ನು ತುಂಬಾ ಸೂಕ್ಷ್ಮ ಅತಿ ಸೂಕ್ಷ್ಮವಗಿ ಮತ್ತು ಲಿಂಗಾಯಿತ ಪರಂಪರೆಯ ಗರ್ಭ ಸಂಸ್ಕಾರ ಕುರಿತು ಎಳೆ ಎಳೆಯಾಗಿ ಅಭಿವ್ಯಕ್ತಗೊಳಿಸಿದ್ದಾರೆ. ಕರಣಹಸಿಗೆಗೆ ಪರ್ವತ ಶಿವಯೋಗಿ ಹಸ್ತಪ್ರತಿ ಸೂಚಿ ಬೃಹನ್ ಮಠ ಚಿತ್ರದುರ್ಗ ೧೯೯೧ ಕ್ರಮಾಂಕ ೫೨೦ ಪುಟ ೩೬, ೩೭ ಅಭಿವ್ಯಕ್ತಿಗೊಂಡಿದೆ. ಡಾ॥ ಎಲ್.ಬಸವರಾಜು ರವರು ೧೯೮೭ ರಲ್ಲಿ ಪುಟ ೧೯ ರಲ್ಲಿ ವೀರಶೈವ ತತ್ವ ಆಚರಣೆಗಳನ್ನು ಅಭಿವ್ಯಕ್ತಗೊಳಿಸಿದ್ದಾರೆ.

ಕರಣ ಹಸಿಗೆ ಟೀಕೆ ಗದ್ಯ ಇಮ್ಮಡಿ ಗುರುಸಿದ್ದ ಸ್ವಾಮಿ (ಹಸ್ತ ಪ್ರತಿಸೂಚಿ ಪೂರ್ವಕ್ತ) ಕ್ರಮಾಂಕ ೨೨೪ ಪುಟ ೩೬, ೩೭ ರಲ್ಲಿ ಈ ಮಾಹಿತಿಯನ್ನು ತಿಳಿಸಿದ ಎಸ್. ಶಿವಣ್ಣ ಬೆಂಗಳೂರು ವಿಶ್ವವಿದ್ಯಾಲಯದ ಇವರಿಗೆ ಋಣಿ) ೧೯೯೯ ರಲ್ಲಿ ಅನಾದಿ ವೀರಶೈವ ಸಂಗ್ರಹ ಸಂಪಾದಕರಾದ ಜಿ.ಎಸ್.ಶಿವಲಿಂಗಯ್ಯ ಬಸವ ಸಮಿತಿ ಬೆಂಗಳೂರು ಪುಟ – ೧೮೮ ರಲ್ಲಿ ಕರಣ ಹಸಿಗೆಯ ಮಹತ್ವವನ್ನು ಪರಿಪರಿಯಾಗಿ ವಿವರಿಸಿದ್ದಾರೆ.

ಕರಣಹಸಿಗೆ ಕುರಿತು ತಂತ್ರ ಸಂಗ್ರಹ, ಶಂಕ್ರಪ್ಪ ಅಚ್ಚಪ್ಪ ಟೋಪಿಗೆ ಹುಬ್ಬಳ್ಳಿ ಇವರು ೧೯೧೪ ರಲ್ಲಿ ಕರಣ ಹಸಿಗೆಯ ಅಂತರಂಗದ ಬಹಿರಂಗದ ಮತ್ತು ನವದ್ವಾರಗಳ ಕ್ರಿಯೆಗಳನ್ನು ಪುಟ–೭ ರಲ್ಲಿ ಅಭಿವ್ಯಕ್ತಗೊಳಿಸಿದ್ದಾರೆ. ಡಾ॥ ಹೆಚ್. ಪಿ. ಮಲ್ಲಯ್ಯ ದೇವರು ಪ್ರಾಂಚ್ಯ ವಿದ್ಯಾ ಮೈಸೂರು ವಿಶ್ವವಿದ್ಯಾನಿಲಯ ವತಿಯಿಂದ ವಾತುಲಶುದ್ಧಾಗಮ ಎಂಬ ಕೃತಿಯನ್ನು ೧೯೮೮ ಸಂಖ್ಯೆ ೩೮, ೩೯ ರಲ್ಲಿ ಗರ್ಭ – ಉಪನಿಷತ್ತು ಕರಣಹಸಿಗೆಯ ಪಿಂಟೊತ್ಪತ್ತಿ ಎರಡು ಆಯಾಮಗಳನ್ನು ಸಮಕ್ಷಮವಾಗಿ ಜನ ಸಾಮಾನ್ಯರಿಗೆ ಅರ್ಥವಾಗುವಂತೆ ಅಭಿವ್ಯಕ್ತಗೊಳಿಸಿದ್ದಾರೆ. ೨೦೧೭–೧೮ನೇ ಸಾಲಿನಲ್ಲಿ ಬಸವ ಯುಗದ ಶರಣರ ವಚನೇತರ ಸಾಹಿತ್ಯ ಸಂಪಾದಕರಾದ ಡಾ॥ ರವೀಂದ್ರನಾಥ ಬಸವ ಸಮಿತಿ ಬೆಂಗಳೂರು ವತಿಯಿಂದ ಮುದ್ರಿಸಲ್ಪಟ್ಟ ಕೃತಿಯಲ್ಲಿ ಚೆನ್ನಬಸವಣ್ಣನವರ ವಚನೇತರ ಸಾಹಿತ್ಯ ೧೧೫ನೇ ಕರಣಹಸಿಗೆಮಿಶ್ರಾರ್ಪಣ ೧೩೪ ಸೂಕ್ಷ್ಮ ಅತೀ ಸೂಕ್ಷ್ಮವಾಗಿ ಫ.ಗು. ಹಳಕಟ್ಟಿಯವರ ತತ್ವದ ಉತ್ತರಾಧಿಕಾರಿಯಾಗಿ ಮಾರ್ಮಿಕವಾಗಿ ಡಾ॥ ರವೀಂದ್ರನಾಥರವರು ೨೧ನೆಯ ಶತಮಾನದ ಮನುಕುಲಕ್ಕೆ ಮತ್ತು ಪಂಚಭೂತಗಳಿಗೂ ಒಂದಕ್ಕೊಂದು ಅವಿನಾಭಾವ ಸಂಬಂಧವಿದೆಯೆಂದು ಆಹಾರಕ್ಕೂ ಮತ್ತು ಕ್ರಿಯೆಗೂ ನಿಕಟ ಸಂಬಂಧವಿದೆಯೆಂದು ನುಡಿಗೂ ನಡೆಗೂ ಭೇಧವಿಲ್ಲವೆಂದು ಸೂಕ್ಷ್ಮ ಅತೀ ಸೂಕ್ಷ್ಮವಾಗಿ ಅಡಿಯಿಂದ ಮುಡಿಯವರೆಗೂ ೬೨ ತತ್ವಗಳನ್ನು ಸರಳ ರೀತಿಯಲ್ಲಿ ಎಳೆ ಎಳೆಯಾಗಿ ಬಿಡಿಸಿದ್ದಾರೆ. ಇಲ್ಲಿಯವರೆಗೆ ೧೫ಕ್ಕೂ ಹೆಚ್ಚು ಸಂಪಾದಕ ಸಹ ಸಂಪಾದಕರು ಆಗಿ ಈ ಕರಣ ಹಸಿಗೆಯ ಕೃತಿಯನ್ನು ಮಾಡಿ ಜನ ಸಾಮಾನ್ಯರಿಗೆ ಅರ್ಥವಾಗದಂತೆ ಶೋಧಿಸಿ ಅಭಿವ್ಯಕ್ತಗೊಳಿಸಿದ್ದಾರೆ. ಇವರೆಲ್ಲರ ಪರಿಶ್ರಮದ ಫಲವಾಗಿ ಕರಣ ಹಸಿಗೆಯ ಕೃತಿಗೆ ಅಂದರೆ ಚೆನ್ನಬಸವಣ್ಣನವರ ಆಶೋತ್ತರದ ಭಾವನೆಗೆ ಇವರೆಲ್ಲರೂ ಕೈಗನ್ನಡಿಯಾಗಿರುವುದು ಬಹಳ ಸಂತೋಷವನ್ನು ತರುತ್ತದೆ. ಇನ್ನು ಇವರ ಬಗ್ಗೆ ಸಂಶೋಧನೆಗಳು ನಡೆಯುತ್ತಿದೆ.

# ಅಡಿ ಟಿಪ್ಪಣಿಗಳು

## ಇದುವರೆಗು ನಡೆದ ಅಧ್ಯಯನಗಳ ಸಮೀಕ್ಷೆ

೧) ಗೌರವ (ಪ್ರೊ. ಎಸ್.ಎಸ್. ಭೂಸನೂರ ಮಠ ಅಭಿನಂದನ ಗ್ರಂಥ)
ಗೌರವ ಗ್ರಂಥ ೨೮೪ರ ಸಂ. ಡಾ. ಬಿ.ವ್ಹಿ.ಶಿರೂರು ವೀರಶೈವ ಅಧ್ಯಯನ ಸಂಸ್ಥೆ
ಜಗದ್ಗುರು ತೋಂಟಾಧಾರ್ಯ ಸಂಸ್ಥಾನ ಮಠ, ಗದಗ – ೧೯೮೬.

೨) ವೀರಶೈವ ತತ್ತ್ವ ಮತ್ತು ಆಚರಣೆ : ಸಂ. ಡಾ. ಎಲ್. ಬಸವರಾಜು
ಶ್ರೀ ಬೃಹನ್ಮಠ ಸಂಸ್ಥಾನ, ಚಿತ್ರದುರ್ಗ – ೧೯೮೭. ಪುಟ : ೧೯

೩) ಡಾ. ಎಸ್.ವಿ. ಅಯ್ಯನಗೌಡರವರ ಮೈಲಾರ ಬಸವಲಿಂಗ ಶರಣರ
ಜೀವನ ಹಾಗೂ ಸಮಗ್ರ ಕೃತಿ ದರ್ಶನ
ಪುಟ ೨೩೭ ರಿಂದ ೨೩೮ರ ವರೆಗೆ ತೆಗೆದುಕೊಳ್ಳಲಾಗಿದೆ.

೪) ಕರಣ ಹಸಿಗೆ ಟೀಗೆ : ಪರ್ವತ ಶಿವಯೊಗಿ, ಹಸ್ತ ಪ್ರತಿಸೂಚಿ
ಬೃಹನ್ಮಠ, ಚಿತ್ರದುರ್ಗ – ೧೯೯೧. ಕ್ರಮಾಂಕ : ೫೨೦, ಪುಟ : ೩೬–೩೭

೫) ಕರಣ ಹಸಿಗೆ ಟೀಕೆ (ಗದ್ಯ) : ಇಮ್ಮಡಿ ಗುರುಸಿದ್ದಸ್ವಾಮಿ ಹಸ್ತಪ್ರತಿ ಸೂಚಿ (ಪೂರ್ವೋಕ್ತ) ಕ್ರಮಾಂಕ ೫೨೪, ಪುಟ ೩೬–೩೭ (ಈ ಮಾಹಿತಿಯನ್ನು ತಿಳಿಸಿದ ಎಸ್. ಶಿವಣ್ಣ, ಬೆಂಗಳೂರು ವಿಶ್ವವಿದ್ಯಾನಿಲಯ ಇವರಿಗೆ ಋಣಿ)

೬) ಡಾ. ರವೀಂದ್ರನಾಥ ಸಂಪಾದಿಸಿದ ವಚನೇತರ ಸಾಹಿತ್ಯ ಪುಸ್ತಕದಿಂದ ಈ ಕೃತಿಯು ಬಸವ ಸಮಿತಿಯಿಂದ ೨೦೧೭–೧೮ನೇ ಸಾಲಿನಲ್ಲಿ ಬಿಡುಗಡೆಗೊಳಿಸಿದ್ದಾರೆ.

ಅಧ್ಯಾಯ–೩

# ಕರಣ ಹಸಿಗೆಯ ಅರ್ಥ ಹಾಗೂ ಲಕ್ಷಣ

೧.೧. ಕರಣ ಹಸಿಗೆಯ ಅರ್ಥ

೧.೨. ಕರಣ ಹಸಿಗೆಯ ಲಕ್ಷಣ

# ೩. ಕರಣ–ಹಸಿಗೆಯ ಅರ್ಥ ಹಾಗೂ ಲಕ್ಷಣ

**ಕರಣ ಹಸಿಗೆಯ ಅರ್ಥ:**

'ಕರಣ' ಎಂದೊಡೆ ತತ್ವಗಳು , 'ಹಸಿಗೆ' ಎಂದೊಡೆ "ವಿಭಾಗವು", ಕರಣ ಹಸಿಗೆ ಎರಡು ಪದಗಳಿಂದ ಕೂಡಿದ್ದು, ಕರಣ+ಹಸಿಗೆ=ಕರಣಹಸಿಗೆ ಎಂದೆನಿಸುತ್ತಿದೆ. ಇದನ್ನು ರಚಿಸಿದವರು ಚಿನ್ಮಯಿಜ್ಞಾನಿ, ಕರತಲದ ಮಣಿ ಮುಖೋರ, ಜ್ಞಾನ ನಿಧಿ ನಕ್ಷತ್ರನಾದ, ಲಿಂಗಾಯಿತ ಧರ್ಮಕ್ಕೆ ತಾತ್ವಿಕ ಚೌಕಟ್ಟನ್ನು ಕೊಟ್ಟು ಷಟುಸ್ಥಲ ಜ್ಞಾನಿ, ಚೆನ್ನಬಸವಣ್ಣ ಕರಣ ಹಸಿಗೆಯಲ್ಲಿ ನಿರೂಪಿತವಾಗಿರುವ ವಿಷಯಗಳನ್ನು ಒಟ್ಟಾರೆ ಅಭಿನಿವೇಶವಿಲ್ಲದೆ ಪರಿಶೀಲಿಸಿದ್ದಲ್ಲಿ ಅದು ವೀರಶೈವ ಅಥಾಪ ಲಿಂಗಾಯಿತರಿಗೆ ಮೀಸಲಾದ ಕೃತಿ ಎನಿಸುವುದಿಲ್ಲ. ಲಿಂಗಾಯಿತ ಧರ್ಮಪರಿಕಲ್ಪನೆಗಳಾದ ಅಷ್ಟ ವರುಣ, ಪಂಚಚಾರ, ಷಟುಸ್ಥಲ ಪ್ರಸ್ತಾಪವೇ ಮೂಲ ಪಠ್ಯವಲಿಲ್ಲ. ಇದು ಗಮನಿಸಬೇಕಾದ ಸಂಗ್ಯೆ. ಶ್ರೀ ಡಾ॥ ಇಮ್ಮಡಿ ಶಿವಬಸವ ಸ್ವಾಮಿಗಳು ತಮ್ಮ ವ್ಯಾಖ್ಯಾನ ಕೃತಿಯಲ್ಲಿ ಹೇಳಿರುವುದು ಒಪ್ಪುವಂತಿದೆ.

ಡಾ॥ ಎಸ್.ವಿದ್ಯಾಶಂಕರ ರವರು ರಚಿಸಿರುವ "ವೀರಶೈವ ಸಾಹಿತ್ಯ ಚರಿತ್ರೆ" ಸಂಪುಟ ಮೂರರಲ್ಲಿ ಅಭಿವ್ಯಕ್ತಗೊಂಡಿದೆ. ಹಾಗೂ ಡಾ॥ ಫಾ.ಗು.ಹಳಕಟ್ಟಿ ರವರು ಸಂಪಾದಿಸಿದ ವಚನ ಶಾಸ್ತ್ರಸಾರ ಭಾಗ ಎರಡರಲ್ಲಿ ಚೆನ್ನಬಸವಣ್ಣ ನವರ ಕರಣ ಹಸಿಗೆ ಅರ್ಥ ಹೇಗಿರುವುದು ಕರಣ ಹಸಿಗೆ ಎಂಬ ಪ್ರಕರಣವು ಈ ಶಾಸ್ತ್ರಗಳ ತತ್ವಗಳ ಸಂಗ್ರಹ ವಿಭಾಗದ ವಿವರಣೆ ಎಂಬ ನಾಮವು ಏನು ಕಾರಣ ಬಂದಿತಲೇ ಸ್ವಾಮಿ? ಎಂದು ಬೆಸಗೊಂಡದೆ "ಕರಣ" ಎಂದೊಡೆ ತತ್ವಗಳು "ಹಸಿಗೆ" ಎಂದೂ "ವಿಭಾಗಗಳು" ಅದು ಹೇಗೆಂದೊಡೆ ಒಬ್ಬನೊಬ್ಬ ರೈತನು (ಹಲಯುದನು) ಮಳೆಯ ಹದವಿ ಭೂಮಿಯ ಬೆದೆಯನರಿದು ಎತ್ತು ಕಟ್ಟಿ, ಕುಂಟೆ, ಕೂರಿಗೆ, ನೊಗ, ನೇಗಿಲು, ಮೀಣೆ, ಬಾರಿಕೋಲು ಮುಂತಾದವುಗಳನ್ನು ತೆಗೆದುಕೊಂಡು ಹೋಗಿ ಹೂಡಿ ಹೊಡೆದು ಅರಗಿ ಹಸನ ಮಾಡಿ ಹದಿನೆಂಟು ದಾನ್ಯಗಳನ್ನು ಬಿತ್ತಿ, ಕಳೆ, ಮಳೆಯು ತೆಗೆದು ಸುರಕ್ಷಿತವಾಗಿ ಸಲಹೆ, ಫಲಪೂರಿತವಾದ ಬಳಿಕ ಲವಿತ್ರವ ತೆಗೆದುಕೊಂಡು ಛೇದಿಸಿ ಕಂತೆಯಂಕಟ್ಟಿ ಬಣವಯನ್ನೊಪ್ಪಕಣವ ಮಾಡಿ ಮೇಟಿಯ (ನೆಪ್ಪು) ವಡ್ಡವನ್ನು ಹಾಕಿ ತುಳಿಸಿ ಹಸನು ಮಾಡಿ ಬಕ್ಕ ತೂರಿ ರಾಶಿಯನ್ನು ಮಾಡಿದ ಬಳಿಕ ಹಸ್ತದಲಿ ಕೊಳಗವ (ಶೇರು) ತೆಗೆದುಕೊಂಡು ಅಳೆದಲ್ಲಿ ನೆಲ್ಲಷ್ಟವಾಗಿತ್ತು. ರಾಗಿಷ್ಟಾಗಿತ್ತು. ಗೋಧಿಷ್ಟಗಿತ್ತು, ಕಡಲಇಷ್ಟಾಗಿತ್ತು, ಅವರೆ, ತೊಗರಿ, ಹುರಳಿ, ನವಧಾನ್ಯಗಳು ಅಥವ ವಿವಿಧ ದಾನ್ಯಗಳು ಇಷ್ಟವಾದವೆಂದು ಅಳವಳಿದು ಹಾಸಿಗೆಯಂ ಮಾಡುವ ಹಾಗೆ ಇಂತಿ ಬ್ರಹ್ಮಾಂಡವೆಂಬ ಕ್ಷೇತ್ರದಿ ಪರೆಯೆಪ್ಪ ಪರಶಿವನೆಂಬ ಅಲಾಯುಧನು ಆದಿಯಲಿ. ತನ್ನ ಪಂಚಮುಖಗಳಿಂದ ಪಂಚಭೂತಗಳು ಪುಟ್ಟಿಸಿ ಆ ಪಂಚಭೂತಗಳ ತಾರತ್ಯಮದಿಂ, ೨೫ ತವಗಳಂ ಪುಟ್ಟಿಸಿ, ಆ ೨೫ ತತ್ವಯುಕ್ತವಾದ ಶರೀರವನ್ನು ತನ್ನ ಗೌಪ್ಯ ಮುಖದಲ್ಲಿ ಆತ್ರನಂಪುಟ್ಟಿಸಿ, ಆ ಆತ್ಮನಿಗೆ ಸಂಬಂಧವಂ ಮಾಡಿಕೊಳ್ಳಲು ಆ ಆರ್ತನು ಅದೇ ಅಹಂಭಾವ ಮರವೇ ಇದಂ ತನ್ನ ನಿಜವಂ ಮರೆದು ಅಜ್ಞಾನಿಯಾಗಿ ಅನೇಕ ಜನ್ಮಗಳಲ್ಲಿ ಹುಟ್ಟಿ ಹುಟ್ಟಿ ಬರುವಲ್ಲಿ ಅಕ್ಕಮಹಾದೇವಿ ಹೇಳುವಂತೆ ಭವ ಬಂಧನ ಭವ ಪಾಶವಾದ ಕಾರಣವೇನಯ್ಯ, ಇಂದಣ ಜನುಮದಲಿ ಗುರುಲಿಂಗ ಜಂಗಮರ್ಗಪೂಜಿಸಲ ನರಿಯದ ಕಾರಣಕ್ಕೆ ಬಹುಜನ್ಮಕ್ಕೆ ತಂದಿಕ್ಕಿದಯ್ಯ ಆ ನಿಲುವು ಕರಣ ಹಾಸಿಗೆಯಲ್ಲಿ ವ್ಯಾಪಿಸಿಕೊಂಡಿದೆ. ಈ

ಯುಕ್ತಿಯನ್ನು ವೀರಶೈವ ಲಘು ಸಾಹಿತ್ಯ ಪ್ರಕಾರಗಳು ಎಂಬ ಸಂಶೋಧನ ಕೃತಿಯನ್ನು ಶ್ರೀ ಆರ್.ವಿ.ಪಾಟೀಲರವರು ಸಂಶೋಧಿಸಿದಿರುವ ಅಪ್ರಕಟಿತ ಕೃತಿಯಿಂದ ತೆಗೆದುಕೊಳ್ಳಲಾಗಿದೆ.

ಕರಣ ಹಸಿಗೆ ಅರ್ಥದ ಸೃಷ್ಟಿಗೆ ಕಾರಣವಾದ ಪರ ವಸ್ತುವನ್ನು ಕುರಿತು ಉಪನಿಷತ್ತುಗಳಲ್ಲಿ ಎರಡು ಪುಷ್ಟಿಗಳನ್ನು ಹೊಂದಿರುವುದು ಪರ ವಸ್ತುವಿನ ಎರಡು ಭಿನ್ನತೆ ಅಷ್ಟ ಹಾಗೂ ಪರವಸ್ತು ಅಥವಾ ಜೀವ ಬ್ರಹ್ಮ ಇವುಗಳ ಸಂಬಂಧವನ್ನು ಬೇರೆ ಬೇರೆಯಾಗಿ ಅವು ಹೇಳುತ್ತವೆ. ವಿಶ್ವಾರ್ತಕ ದೃಷ್ಟಿಯ ಪ್ರಕಾರ ಬ್ರರ್ಹವೇ ತಾತ್ಕಾಲಿಕವಾಗಿ ವಾಸ್ತವಿಕವಾಗಿ ಆರ್ತವಾಗಿ ರೂಪಪರಿವರ್ತನೆ ಹೊಂದಿದೆ. ಅದರಿಂದ ಬ್ರಹ್ಮವು ಆರ್ತವು ಏಕೋಹ ಆಹುದು ಬೇರೆ ಬೇರೆ ಹೌದು, ವಿಶ್ವಾತೀತ ಸೃಷ್ಟಿಯ ಪ್ರಕಾರ ಜೀವವಂತೆ ತೋರುವ ಬ್ರರ್ಹವೇ ಅದರಿಂದ ಬ್ರಹ್ಮವು ಜೀವದಿಂದ ಬೇರೆ ಅಲ್ಲವೆ ಅಲ್ಲ, ಜೀವನ ಬ್ರಹ್ಮನ ರೂಪ ಪರಿವರ್ತನೆ ಆಗಲಿ ಅಥವಾ ಬಿಡಲಿ ಅವರ ಜೀವನ ಸತ್ವವಿರುವುದು ಬ್ರರ್ಹದ ಸ್ವರೂಪ ಭೂತ ಏಕತೆಯನ್ನು ಮರೆತಿರುವುದರಿಂದ ಅರು ಪರಿಮಿತ ಎಂಬ ಅರ್ಥ.

ಉಪ ನಿಷತ್ತುಗಳ ಪ್ರಕಾರ ಜೀವವು ತನ್ನನ್ನು ತಾನು ಮೀರುವುದು ಅದು ತಾನೂ ಭಾವಿಸಿರುವಂತೆ ವಾಸ್ತವವಾಗಿ ಪರಿಮಿತ ವಸ್ತುಗಳಲ್ಲಿ ಎಂಬುದನ್ನು ತಿಳಿಸುತ್ತದೆ. ಹೀಗೇ ಪ್ರಾಚೀನ ಧರ್ಮಶಾಸ್ತ್ರ ಗ್ರಂಥಗಳಿಂದ ಸೃಷ್ಟಿ ರಹಸ್ಯ ಭೇದಿಸಲು ವಿಜ್ಞಾನಿಗಳು ತತ್ವಜ್ಞಾನಿಗಳು ಆಸಕ್ತಿ ವಹಿಸಲು ಬಂದಿರುವರು. ವೀರಶೈವ ಲಿಂಗಾಯಿತ ಶರಣರ ತತ್ವ ಸಿದ್ಧಾಂತ ನೆಲೆಗಟ್ಟಿನ ಮೇಲೆ ರೂಪಿತವಾದ ಸೃಷ್ಠಿ ಶಿವನಿಂದಲೇ, ಚೈತನ್ಯವು ವಿಶ್ವವನ್ನು ಸೃಷ್ಠಿ ಮಾಡುವ ಪ್ರಕಾರದಲ್ಲಿ ತನ್ನ ಅನಂತ ಶಕ್ತಿಯ ವಿಲಾಸದಿಂದ ಗ್ರಹ್ಯ, ಗ್ರಹಕ, ರೂಪಕಗಳನ್ನು ಪಡೆಯಿತು.

ಗ್ರಹ್ಯ ತಿಳಿಯಲ್ಪಡುವ ವಸ್ತು ಗ್ರಹಕ ತಿಳಿಯುವ ಶಕ್ತಿ ಹೂಂದಿರುವ ಚೈತನ್ಯವಾಗಿದೆ. ಪುಣ್ಯದಿಂದ ದೇವತಾ ಜನ್ಯ, ಶಾಪದಿಂದ ಸ್ಥಾವರಜನಕ, ಪುಣ್ಯ ಪಾಪಂಗಳ ಸಮನ್ವಯದಿಂದ ಮನುಷ್ಯ ಜನ್ಮವಾಗುವುದು. ಸ್ಥೂಲ ಸೂಕ್ಷ್ಮ ಕಾರಣ ಶರೀರವು ತತ್ವಗಳನ್ನೊಳಗೊಂಡ ಶಕ್ತಿ ವಿಶಿಷ್ಟ ತತ್ವವಾಗಿ ಕಾರಣ ಈ ಶಾಸ್ತ್ರಕ್ಕೆ ತತ್ವ ವಿಭಾಗವೆಂದವು. ಪ್ರಸಿದ್ಧವಾಗಿವೆಂಬುದೀಗ ಕರಣ ಹಸಿಗೆ ಎಂಬ ಶಬ್ದದ ಅರ್ಥ. ಅನಂತರ ಚೆನ್ನಬಸವಣ್ಣನವರು ಕರಣ ಹಾಸಿಗೆಯಲ್ಲಿ ಪ್ರಸ್ತಾಪಿಸಿರುವ ಈ ಧಾರ್ಮಿಕ ತಾತ್ವಿಕ ಅಂಶಗಳನ್ನು ವಿವರಿಸಲಾಗಿದೆ. ಈ ಶಾಸ್ತ್ರದಲ್ಲಿ ತತ್ವಮ್ ಪದರ್ಥ ರೂಪನಾದ ಲಿಂಗಾಂಗಸ್ಥಲ ಸಂಯೋಗವೇ ಸಂಬಂಧ ಸತ್‌ಚಿತ್ ಆನಂದ ನಿತ್ಯ ಪರಿಪೂರ್ಣ ಸ್ವರೂಪವೆನಿಸಿದ ಶ್ರೀಗುರುಲಿಂಗಜನುಮ ಪಾದೋದಕ ಪ್ರಸಾದವೆಂಬ ಪರಿಚಯಿಸಿದ ರೂಪಕವೆಂದು ಪ್ರತಿಪಾದಿಸುತ್ತಾರೆ. ಅರ್ಥಲಕ್ಷಣ ಆನೆವೃದ್ಧಿ ಇಲ್ಲಿದೆ. ಸುಮಾರು ಸಮರಸವಾದ ಸ್ವರೂಪ ಸಾಕ್ಷಾತಾರವಪ್ಪ, ಮೋಕ್ಷವೇ ಪ್ರಯೋಜನ ೧, ೨, ೩, ೫,೩೬, ೨೧೬ ಮುಂತಾದ ಸರ್ವಚಾರ್ ಸಂಪತ್ತಿನ ಆಚರಣೆಯಲ್ಲಿ ಮುಮುಕ್ಷವಾದ ಸದ್ಭಕ್ತನಧಿಕಾರಿ ಇಂತಪ್ಪ ಗುಣನ್ನಿತನಾದ ಅಧಿಕಾರಿಗೆ ಅಗುಗುಣವಾದ ಈ ಶಾಸ್ತ್ರವು ಪ್ರಯೋಜನ ಈ ಶಾಸ್ತ್ರದಲ್ಲಿ ಮೊದಲಾವುದಯ್ಯ ಎಂದೊಡೆ ಪ್ರಣವತ್ಪತ್ತಿ ಪ್ರಣವದ ನಿರ್ದೇಶನವೇ ಮೊದಲಾಗಿವುದು.

ಲೀಯತೇ ಗಮ್ಯತೇ ಜಗತ್ಸಕ್ವಂ ಚಕಾಚರಮ್।

ತದೇತಲ್ಲಿಗಮಿತ್ಯುಕ್ತಂ ಲಿಂಗಾಕಾರಿಮಿತಿ ಸ್ಕೃತಮ್।

ಲಿಕಾರಂ ವಿಲಿಯಂ ಪ್ರೋಕ್ತಮ್ ಗಕಾರಂ ಗಮನಮ್ಯುಚ್ಯತೀ।
ಲೀಯ ಸಾಗದುಸೌಭ್ಯಾಂಚಲಿಂಗಶಬ್ದರಿತಿ ಸ್ಮೃತಃ॥
ನರಕ ನ ಚ ವಾ ಪೀತಂ ಶುಕ್ಲಂ ಕೃಷ್ಣಮೇವಚ।
ಸರ್ವವರ್ಣವಿನಿರ್ಮುಕ್ತಂ ಜ್ಞಾನತೀತಂ ಪರಾತ್ಪರಮ್।
ಮನ್ನಾಥಸ್ತ್ರಜಗನ್ನಾಥೋ ಮದ್ಗುರುಃ ಸ್ತ್ರೀಜಗದ್ಗುರು।
ಮಮ್ಮತ್ಯಾ ಸ್ವರಭೂತಾತ್ಮ ತಸ್ಮೈಶ್ರೀ ಗುರುವೇ ನಮಃ॥

ಆ ಶೂನ್ಯ ಲಿಂಗಕ್ಕಂಗಪಾಗಿರುವಂತಾದ್ದೇ ಮಹಾಜ್ಞಾನ ಚಿತ್ತು
ಅಪಾಭ್ಯ ಪುಣವಚಿಂತಾಯಾಂ ಕಲಾಪುಣಸಂಭವತಿ ಎಂದು ಹೇಳುತ್ತಿಹುದಾದ

ಕಾರಣ, ಆಶೂನ್ಯಲಿಂಗದ್ದೆ ಮಹಾಜ್ಞನ ಚಿತ್ತದ ನೆನಪು ಮೊತ್ತದಿಂದ ಕಲಾ ಪ್ರಣವ ಸ್ವರೂಪವಾದ ನಿಃಕಲಬ್ರಹ್ಮವು ಹುಟ್ಟಿತು. ಆ ನಿಃಕಲಬ್ರಹ್ಮರಂಗವಾಗಿರುವಂತದ್ದೇ ಜ್ಞಾನಚಿತ್ತು. ಆಚಿತ್ತಿನ ಚಿನ್ನದವೇ ಬಕಾರ, ಚಿದ್ಬಂದವೇ ಸಕಾರ, ಚಿತ್ತಕಳೆಯ ವಕಾರ ಆ ಚಿನ್ನದ ಚಿದ್ಬಯ ಬಿಕ್ಕಳ ಮೂಲ ಚಿತ್ತೆಂಬ ಚತುರ್ವಿಧವು ಗಟ್ಟಿಗೊಂಡು ಅಖಂಡ ಗೋಣಕಾರ ತೇಜೋಮೂರ್ತಿಯಪ್ಪ ಮಹಾಲಿಂಗವಾಯಿತು. ಆ ಲೋಕದಲ್ಲಿ ಅಕ್ಷರದಡಗಿದ ಹಾಗೆ ಅಕ್ಷರದಲ್ಲಿ ಅರ್ಥ ಅಡಗಿರುವ ಹಾಗೆ ಹೋಗಲು ಭಾಜನದಲ್ಲಿ ಸಕಲ ಸಾಧನ ದ್ರವ್ಯಂಗಳಿಗಿರುವ ಹಾಗೆ ಅಂಗಿ ಅರೆಚಾಪೆಗಳಲ್ಲಿ ಅವಯವ ಅಡಗಿರುವ ಹಾಗೆ ಕಣತಪಣತಾದಿಗಳಲ್ಲಿ ೧೮ ಧಾನ್ಯಗಳು ಅಡಗಿರುವ ಹಾಗೆ ಭತ್ತಳಿಕೆಯಲ್ಲಿ ಅಂಬುಗಳು ಅಡಗಿರುವ ಹಾಗೆ ಅಡಗಲ್ಪತ್ತಾಗಿಬಂಡಾಮಾದ್ದೆಯಲ್ಲಿ ನೋಡಿದರೆ ಕಾಣಬಾರದು (ಪುಟ ೪೩) ನಿದ್ರೆಯ ಜಾಗ್ರ ಸ್ವಪ್ನಸುಸುತ್ತಿಯ ಅವಸ್ಥೆಯಲ್ಲಿ ಬೆಕ್ಕು ಕಂಡ ಇಲಿಯಾಪಾದಿಯಲಿ, ಅನ್ಯೋಧಕಗಳ ಯಥೇಚ್ಚವಾಗಿ ತೆಗೆದುಕೊಂಡು ಒಂದಾನೊಂದು ಹುಡಿಬಿಟ್ಟ ಕುಂಟೆಯ ದಿಂಡಿನ ಹಾಗೆ ತರಿದು ಕೆಡವಿದ. ಸ್ಥಾಣುವಿನ ಹಾಗೆ ಚೋಳವೀರ ಕೆಡುವಿದಕೋಣನ ಹಾಗೆ, ತುರುಕರ ಮನೆಯ ಹೆಣದ ಹಾಗೆ ದಿವಕಾಲನಿಷಂಕಾಲಗಳಲ್ಲಿ ವಡಗಡೆದು ಮಲಗಿರುವಂತಹ ದೇಹದ ಅತಿಜಾಯಯು ನೋಡ ಒಂದಾನೊಂದು ಕಾಕಯುವಂತ ಕೊಡಲಿ, ಕೊಯ್ಯುವಂತಹ ಕುಡುಗೋಲು, ಕುಟ್ಟುವಂತಹ ಒನಕೆ, ಬೀಸುವಂತಹ ಕಲ್ಲು,ಕೇರುವವಂತಹ ಮರ, ಮುಂತಾದ ವಸ್ತುಗಳು ಒಬ್ಬನೊಬ್ಬ ಆರ್ತವೀರನದಿಂದಾಲ್ಲದೆ , ಸ್ವಯಾದೀನವಿಂದ ಚಸ್ಪಿದವಿಯವು ಇವುಗಳು ತಮ್ಮ ತಮ್ಮ ಸಂಬಂಧವಾದ ವಿಷಯಗಳನ್ನು ಮನಸಾದಿನದೊಡನೆ ಕೂಡಿಕೊಂಡು ವಾಯುವಿನ ಚೈತನ್ಯ ಒಲವಿಂದನೇ ಗ್ರಹಿಸಿತ್ತಹುದಾದ ಕಾರಣ ಇದಕ್ಕೆ ಕ್ರಿಯಾ ರೂಪ ಮಾಡ ಪಂಚ ಋಷಿಗಳೆಂಬ ಸಾಮವು ಪ್ರಸಿದ್ಧಿಯಾಗಿತ್ತು ಎಂದು ಕರಣ ಹಸಿಗೆಯಲ್ಲಿ ಡಾ॥ ಇಮ್ಮಡಿ ಶಿವಬಸವ ಸ್ವಾಮಿಗಳು ವ್ಯಕ್ತಪಡಿಸಿರುತ್ತಾರೆ.

ಸಕಲ ತತ್ವಗಳು ಬೇರೆ ಬೇರೆ ಹಸಿಗೆಯ ಮಾಡಿ ವಿಸ್ತರಿಸಿ ಹೇಳುತ್ತಿಹುದಾದ ಕಾರಣ ಶಾಸ್ತ್ರಕ್ಕೆ ತತ್ವ ಆರು ವಿಭಾಗದೆಂಬ ಅಭಿದಾನವು ಪ್ರಸಿದ್ಧವಾಗಿತ್ತೆಂಬುತ್ತೀಗ ಕರಣ ಹಸಿಗೆ ಎಂಬ ಶಬ್ದ ಅರ್ಥ, ಅಂದರೆ ಹಿಂಡಗಾತವಾದ ಸಮಸ್ತಭಾಗ ವಿಭಾಗಗಳ ಹೊಂದಾಣಿಕೆ ಅವುಗಳ ಪರಸ್ಪರ ಅನ್ಯೋನ್ಯತೆ ದೇಹಕ್ಕೂ ಮತ್ತು ವಿಶ್ವತತ್ತಕ್ಕೂ ಇರುವ ಸಂಬಂಧ ಸ್ವರೂಪ ಶಾಸ್ತ್ರ ಸಮ್ಮತ

ವಿವರಣೆಯ ಕರಣ ಹಸಿಗೆಯಲ್ಲಿ ಡಾ॥ ಬಿ.ವಿ. ಶಿರೂರ್ ರವರು ಸಮ್ಮತ ವ್ಯಕ್ತಪಡಿಸಿದ್ದಾರೆ. ಇದರಲ್ಲಿ ಎರಡು ಪದ ಸಮುಚ್ಚಯಗಳಿವೆ. ಕಾರಣ ಎಂಬುದಕ್ಕೂ ಇಂದ್ರಿಯಾಂಗಳು ಎಂದರ್ಥ "ಹಸಿಗೆ" ಎಂಬ ಪದ "ಪಶು" ಎಂಬ ಮೂಲದಿಂದ ಬಂದಿದ್ದು ( Devide Divicion, Clasification, Analysis) ಎಂಬರ್ಥಗಳನ್ನೊಳಗೊಂಡಿದೆ. ಇದರಿಂದ ಕರಣ ಹಾಸಿಗೆ ಎಂಬ ಪದಕ್ಕೆ ಇಂದ್ರಿಯಗಳ ವಿಭಜನೆ ಮೂಲಕ ದೇಹದ ಜ್ಞಾನ ಮಾಡಿಕೊಳ್ಳುವುದು ( Description of Anotomy) ಎಂದರ್ಥ ಮಾಡಬಹುದೆಂದು ತಿಳಿಸಿದ್ದಾರೆ.

ಪಂಚಭೂತಗಳಿಂದ ಕೂಡಿದ ದೇಹಗುಣದಲ್ಲಿ ದೈವಿಕ ಸ್ವಭಾವಗಳು ಸೇರಿವೆ. ದೇಹ ಗುಣಫಲ ಕರ್ಮಗಳೇನು ಲಿಂಗಾಂಗಗ ಸಂಭೂಂಗ ರೀತಿ ಯಾವುದು ಎಂದು ವಿವರಣೆವೊಳಗೊಂಡಿದೆ ವಿಷುದಾರ್ತದಿಗಳೆನಿಸಿದ ಆಸ್ತಿಕ ದಾಶಿನಿಕರು ಕೂಡ ಮುಕ್ತಿಗೆ ಪರಮಪೋಯಾ ಎನಿಸಿದ ಆತ್ಮ ಜ್ಞಾನ ದೇಹ ಇರುವುಗಾಗಲೇ ಸಾದ್ಯವೆಂದು ಹೇಳುವರು. ಅಂತರಂಗದಲಿ ಅರಿವಾದದೊನೆಯ ಬಹಿರಂಗದಲ್ಲಿ ಕ್ರಿಯೆಯಿಲ್ಲದರ್ಯಾನಯ್ಯ, ದೇಹವಿಲ್ಲದಿದ್ದೊಡೆ ಪ್ರಾಣಕ್ಕಾಶ್ಯಯ ಉಂಟ ಕನ್ನಡಿ ಇಲ್ಲದೊದ್ದಡೆ ತನ್ನ ಮುಖವು ಕಾಣುವುದೇ ಸಹಕಾರ ನಿರಕಾರ ಏಕೋದೇವೂ ಕೂಡಲ ಚನ್ನಸಂಗಮದೇವ ಎಂದು ಚೆನ್ನಬಸವಣ್ಣನವರು ಅಂತರಂಗ ಬಹಿರಂಗದ ಒಡವೆಗಳು ಒಂದಾದ ಮೇಲೆ ಗುಡಾರ್ಥಗಳು ಬಿಚ್ಚಿಗೊಳ್ಳ ಹಾಗೆ. ಬಹಿರಂಗದ ಲಾವಣ್ಯದ ತಿದ್ದಿಕೊಳ್ಳುವುದಕ್ಕೆ ಬಹಿರಂಗದ ದರ್ಪಣವನ್ನು ಬಳಸುತ್ತಾರೆ. ಅಂತರಂಗದ ಲಾವಣ್ಯವನ್ನು ತಿದ್ದಿಕೊಳ್ಳುವುದಕ್ಕೆ ದರ್ಪಣ ಯಾವುದು? ಅಂತರಂಗದ ದರ್ಪಣವೆಂದರೆ "ಈಸ್ಪಲಿಂಗ" ಸಾಧು, ಸಂತ, ಶರಣರ ಸೂಳ್ ನುಡಿಗಳು, ಅಂತರಂಗದ ದರ್ಪಪಾಣವಾಗಿ ಅಭಿವ್ಯಕ್ತಿಗೊಳ್ಳುತ್ತವೆ. ಗೌತಮ ಮತ್ತು ಕಣವ ಋಷಿಗಳು ತಮ್ಮ ನ್ಯಾಯ ವೈಶೇಶಿಕ ದರ್ಶನದಲ್ಲಿ ಶರೀರದ ಬಗ್ಗೆ ವಿಚಾರ ಮಾಡಿದ್ದಾರೆ. ಅವರು ದೇಹವನ್ನು ಭೋಗಾಯಂತಾ ಎಂದೆ ಹೇಳಿರುವರು. ಅಂದರೆ ಜೀವನು ದೇಹದ ಆಶ್ರಯದಲ್ಲಿಯೇ ತಾನೂ ಮಾಡಿದ ಪೂರ್ವಕರ್ಮಗಳ ಫಲಭೋಗವನು ಪಡೆಯುವನು. ಈ ಹಿನ್ನಲೆಯನ್ನು ಇಟ್ಟುಕೊಂಡು ಶರಣರು ತಮ್ಮ ವಚನಗಳಲ್ಲಿ "ದೇಹವೇ ದೇಗುಲ, ಪ್ರಸಾದ ಕಾಯದ ಕೆಡಿಸಲಾಗದ, ಕಾಯದಲ್ಲಿ ಶುದ್ಧ ಪ್ರಸಾದ, ಕಾಯದಿಂದ ಲಿಮ್ಗ, ಜಂಗಮ ದರುಶನ, ಕಾಯವಿಡಿದುಭಕ್ತಿಯ ಮಾಡುವುದು ಕಾಯಲಿಂಗಕ್ಕೆ ಜನರವಾಯಿತ್ತು. ದೇಹದೊಳಗೆ ಶಿವಾಲಯವಿದ್ದು, ಎಂಬತಹ ಕಾಯದ ಮಹತ್ವವನ್ನು ಕುರಿತು ತಿಳಿಸಿದ್ದಾರೆ. ತರ್ಪುಕರಣೇಂದ್ರಿಯಗಳು ತಮ್ಮ ಚೇಸ್ಸಗೆ ಮನವನ್ನು ಬೀಜವನ್ನಗಿ ಮಾಡಿಕೊಂದಿವೆ. ಸ್ವೇಚ್ಚೆಯಾಗಿ ಹರಿಹಾಯುತ್ತಿದೆ. ಇವುಗಳ ಉಪಟಳವನ್ನು ಮುಟ್ಟುಗೋಲು ಹಾಕಲು ನಿಗಾಮಯ ನಿರಸಯ ಷಟ್‌ಸ್ಥಲಗಳನ್ನು ಕಲ್ಪಿಸಿದ್ದಾರೆ. ತನುವೆಂಬ ತೋಟವನು ಹಸನ ಮಾಡಲು ಪ್ರಯತ್ನಿಸಿದ್ದಾರೆ. ದೇಹದ ಶುಚಿತ್ವದ ಪೂರ್ವದಲ್ಲಿ ಅಪರ ಸ್ವರೂಪ, ರಚನಾ ವಿನ್ಯಾಸಗಳನ್ನು ತಿಳಿದುಕೊಳ್ಳುವುದು ಚಿತವೆಂದು ಲಿಂಗಾಯಿತ ಷಟ್‌ಸ್ಥಳ ಸಂಬಂಧವಾದ ರಚನೆಯ ಕರಣ ಹಾಸಿಗೆ.

## ಲಕ್ಷಣ :

ಕರಣಹಸಿಗೆ ಸಾಹಿತ್ಯದು ಈ ಕೆಳಗಿನ ಕೆಲವು ವೈಲಕ್ಷಣಗಳನ್ನು ಒಳಗೊಂಡಿದೆ.

- ಕರಣಹಸಿಗೆ ಸಂಪೂರ್ಣವಾಗಿ ಆಗಮ ಶ್ಲೋಕಗಳಿಂದ ಕೂಡಿದ್ದಾಗಿದೆ. ನಡು ನಡುವೆ ಕನ್ನಡದ ಸಂಕ್ಷಿಪ್ತ ವಿವರಣೆಯಿದೆ.

- ಕರಣಹಸಿಗೆಯ ಇನ್ನೊಂದು ಪ್ರಮುಖ ಲಕ್ಷಣ ಅರ್ಚನಗುಣ ಒಂದರ್ಥದಲ್ಲಿ ಇದು ಸೃಷ್ಟಿವಚನಗಳ ಮುಂದುವರಿದ ಭಾಗವೆಂದು ಹೇಳಬಹುದು.

- ಸಾಂಖ್ಯದಲ್ಲಿ ಪ್ರಾಣವಾಯುಗಳನ್ನು (ಮೂವತ್ತಾರು ಬಗೆಯ ತತ್ವಗಳಲ್ಲಿ ಒಂದು) ತತ್ವಗಳೊಡನೆ ಪರಿಗಣಿಸುವುದಿಲ್ಲ. ಕರಣಹಸಿಗೆಯಲ್ಲಿ ಇವು ತತ್ವಗಳಾಗಿವೆ.

- ಸಾಂಖ್ಯದಲ್ಲಿ ಪಂಚಮಹಾಭೂತಿಗಳೇ ಕೊನೆಯ ತತ್ವಗಳಾದರೆ, ಕರಣಹಸಿಗೆಯಲ್ಲಿ ಇವು ಮೊದಲನೆಯ ತತ್ವಗಳು ಅಂದರೆ ಈ ತತ್ವಗಳಿಂದಲೇ ಕರಣ ಹಸಿಗೆ ಪ್ರಾರಂಭವಾಗುತ್ತದೆ.

- ಷಟಸ್ಥಲಾನುಕ್ರಮದಲ್ಲಿ ನೂರೊಂದು ಸ್ಥಲ ವಿಭಾಗದಲ್ಲಿ ಇಲ್ಲಿಯ ತತ್ವವಿವೇಚನೆ ಇತರೆ ವಚನಕಾರರು ವಚನಗಳಲ್ಲಿ ಬಂದಿದೆಯಾದರೂ ಸಿದ್ಧಾಂತ ಸಮ್ಮತವಾದ ನಿರೂಪಣ ಗ್ರಂಥಾ ಇದಾಗಿದೆ.

- ಸಾಂಖ್ಯದಲ್ಲಿ ಪಂಚಮಹಾಭೂತಗಳು ಪಂಚತನಾತ್ರೆಯತೆಗಳಿಂದ ಸೃಷ್ಟಿಯಾಗಿವೆ ಎಂಬ ಅಭಿಪ್ರಾಯವಿದ್ದರೆ ಕರಣಹಸಿಗೆಯ ಪ್ರಕಾರ ಈ ಸೃಷ್ಟಿಯ ಆರಂಭ ಪಂಚಮಹಾಭೂತಗಳಿಂದಲೇ ಎಂಬುದಾಗಿದೆ. ಅಂದರೆ ಶಬ್ದ, ಸ್ಪರ್ಶ, ರೂಪ, ರಸ ಹಾಗೂ ಗ್ರಂಥಗಳಿಂದ ಪೃಥ್ವಿ, ಅಪ್ಪು, ತೇಜು, ವಾಯು ಮತ್ತು ಆಕಾಶಗಳು ಸೃಷ್ಟಿಯಾಗಿದೆಯೆಂದು ಸಾಂಖ್ಯದ ಅಭಿಪ್ರಾಯವಾದರೆ, ಕರಣಹಸಿಗೆಯ ಪ್ರಕಾರ ಪಂಚಮಹಾಭೂತಗಳಿಂದಲೇ ಸೃಷ್ಟಿ ಸ್ಥಿತಿ ಆರಂಭವೆಂಬುದು ತಿಳಿದುಬರುತ್ತದೆ.

- ಮಹಾಭಾರತದ ಹಾಗೂ ಕರಣಹಸಿಗೆಯಲ್ಲಿ ತತ್ವಗಳ ಉತ್ಪತ್ತಿಯಲ್ಲಿ ಸಾಮ್ಯತೆಯಿರುವುದು ತಿಳಿದು ಬರುವುದರಿಂದ ಕರಣಹಸಿಗೆಯ ವಿವರಗಳು ಮಹಾಭಾರತದ ಕಾಲದ ಪಾಶುಪತದಿಂದ ಪ್ರೇರಣೆ ಹೊಂದಿರಬೇಕೆಂದು ವಿದ್ವಾಂಸರ ಅಭಿಮತವಾಗಿದೆ. ವಿಶೇಷವಾಗಿ ವಿಜಯ ಬೈರವಿಯೆಂಬ ಆಗಮದಿಂದ ಸಂಗ್ರಹಿಸಲಾಗಿದೆಯೆಂದು ಡಾ॥ ನಂದಿಮಠ ತಿಳಿಸುತ್ತಾರೆ.

- ವೇದ–ಆಗಮಗಳೆಂಬ–ತತ್ವ ಸಿದ್ದಾಂತಗಳೆಂಬ ಯಾವುದೇ ಅಲೌಕಿಕ ವಿಚಾರದಲ್ಲಿ ಪ್ರತಿಪಾದನೆ ಮಾಡದೆ ವೈಜ್ಞಾನಿಕ ಮನೋಧರ್ಮಕ್ಕೆ ಹೊಂದಿಕೆಯಾಗುವ ಲೌಕಿಕ ವಿಚಾರಧಾರೆಯನ್ನು ಕೃತಿಪ್ರತಿಪಾದಿಸುತ್ತದೆ. ಒಂದರಿಂದ ನಲವತ್ತು ಭಾಗಗಳಲ್ಲಿ ದೇಹದ ನಾನಾ ಅಂಗಾಂಗಗಳನ್ನು ವಿವರಿಸುತ್ತದೆ. ವಚನೇತರ ಸಾಹಿತ್ಯದ ಸಂಪಾದಕರಾದ ರವೀಂದ್ರನಾಥ್ ರವರು ಲಕ್ಷಣಗಳನ್ನು ಮುಕ್ತವಾಗಿ ವ್ಯಕ್ತಪಡಿಸಿದ್ದಾರೆ. ಮುಖ್ಯವಾಗಿ ಅರ್ಥ ಲಕ್ಷಣಗಲು ಒಂದಾಗಿ ಕರಣ ಹಸಿಗೆಯಲ್ಲಿ ಕೂಡುಪಾವಾಗ ಮನುಷ್ಯನ ದೇಹದ ಜ್ಞಾನ ಮಾಡಿಕೊಡುವುದು ಕರಣ ಹಸಿಗೆಯ ಮುಖ್ಯ ಉದ್ದೇಶವಾಗಿರುತ್ತದೆ. ಈ ಜ್ಞಾನವಿಲ್ಲದಿದ್ದರೆಮನುಷ್ಯಮ್ನು ಹೇಗೆ ನಡೆದು ಶ್ರೇಷ್ಠಸ್ಥಿತಿಯನ್ನು ಹೊಂದಬೇಕೆಂಬುದನ್ನು ಅರಿಯ ನು. ಆದುದರಿಮ್ದ ಷಟ್‌ಸ್ಥಲ ಶಾಸ್ತ್ರದಲಿ ಇದಕ್ಕೆ ಮಹತ್ವದ ಸ್ಥಾನವಿದೆ. ಮನುಷ್ಯನ ದುಷ್ಪಟಗಳು ದೆಹದ ವ್ಯಾಚಾರಗಳನ್ನು ಅದರ ಶಕ್ತಿಗಳನ್ನು ಸಹಜವಾದ ಮತ್ತು ಸರಿಯಾದ ರೀತಿಯಿಂದ ಉಪಯೋಗಿಸುವುದು ಅತ್ಯವ್ಯಶ. ಆದರೆ ಅವುಗಳ ದುರುಪಯೋಗ ಮಾಡಿಕೊಂಡಿದ್ದರೆ ಮನುಷ್ಯನ ಪ್ರಗತಿ ನಿಂತುಹೋಗಿ ಅವನು ಅದೋಗತಿಗೆ ಇಳಿಯುವುದು. ಆದುದರಿಂದ ಇದರ ಜ್ಞಾನವಾದರೆ ಮನುಷ್ಯನಿಗೆ ಇರಬೇಕೆಂದು ವಚನಕಾರರು ಕರಣಹಸಿಗೆ ಯಲ್ಲಿ ನಿರೂಪಿಸಿರುವುದುವುಂಟು. ದೇಹದ ಜ್ಞಾನ ಮನುಷ್ಯನ ದೇಹವು ಹೇಗಿತ್ತು ಹೇಗಾಯಿತು ಅದರಲ್ಲಿ ಯಾವ ಯಾವ ಶಕ್ತಿಗಳಿವೆ. ಆ ಶಕ್ತಿಗಳು ಹೇಗೆ ವ್ಯವಹರಿಸುತ್ತದೆ. ದೇಹದ ಸಹಜ ವ್ಯಾಪಾರಗಳಾವುದು, ಜೀವನ ಗುಣಗಳಾವುವು ಇವೆ ಮೊದಲಾದ ವಿಷಯಗಳು ಇದರಲ್ಲಿ ಬರುತ್ತದೆ. ಲಿಂಗಾಂಗ ಸಾಮರಸ್ಯದಲ್ಲಿ ಕರಣಹಸಿಗೆಯ ಉಪಯೋಗ ಈ ಜ್ಞಾನವನ್ನು ಲಿಂಗಾಂಗ ಸಾಮರಸ್ಯದ ಸ್ಥಿತಿಯನ್ನು ಹೊಂದುವುದರಲ್ಲಿ ಹೇಗೆ ಉಪಯೋಗಿಸಿಕೊಳ್ಳಬೇಕೆಂಬುದರ ತಿಳುವಳಿಕೆಯನ್ನು ಮನುಷ್ಯನು ಉಂಟು ಮಾಡಿಕೊಳ್ಳುವುದು ಅತ್ಯವಶ್ಯಕ ಎಂದು ಕರಣಹಸಿಗೆಯ ಅರ್ಥ ಲಕ್ಷಣಗಳನ್ನು ನಾವು ಅರ್ಥ ಮಾಡಿಕೊಳ್ಳಬೇಕಾಗಿದೆ.

**ಕರಣಹಸಿಗೆಯ ಲಕ್ಷಣಗಳು :**

- ವೈಜ್ಞಾನಿಕ ಮನೋಭಾವನೆಯನ್ನು ವೃದ್ಧಿಸುವ ಶಕ್ತಿಯೊಂದಿದೆ
- ಮಾನವ ದೇಹ ರಚನೆ ವಿವಿಧ ಕ್ರಿಯೆ, ಕಾಯ, ವಾಚಾ, ಮನಸಾರ, ಸೃಷ್ಟಿ ಹೇಗಾಗುವುದು ದಿನದ ಮಹತ್ವದಿಂದ ಮಗು ಹೇಗೆ ಹುಟ್ಟುವುದು ಎಂಬ ಸಂಪೂರ್ಣ ತಿಳುವಳಿಕೆ ಮಾಡಿಕೊಡುತ್ತದೆ.
- ಸೃಷ್ಟಿಯ ಸರಳತೆಯನ್ನು ಕುರಿತು ಮಾಹಿತಿ ನೀಡುವ ಕೃತಿ ಇದಾಗಿದೆ.
- ಅರ್ಚನ, ಅರ್ಪಣ, ಅನುಭವ, ದರ್ಶನವು ಪಡೆಯುವ ವಿಷಯ ಒದಗಿಸುವುದು.
- ಕರಣ ಹಸಿಗೆ ಪ್ರಯೋಗಿತವಾದದು.
- ವಾಸ್ತವ ಸತ್ಯಗಳನ್ನೊಳಗೊಂಡ ಅನುಭವದಿಂದ ಮಾಡಿದ ಶರೀರ ಪರಿಚಯ ಮಾಡಿಕೊಡುವ ಶಾಸ್ತ್ರ ಇದಾಗಿದೆ.

- ಕರಣಹಸಿಗೆಯ ಕೃತಿಯು ಶೋತ್ರೋರೂಪಗಳು ಹಾಗೂ ವಚನಗಳಲ್ಲಿ ಮೂಡಿ ಅಂತರಂಗ ಬಹಿರಂಗವನ್ನು ಒಂದು ಮಾಡುವಂತೆ ಪ್ರೇರೇಪಿಸುತ್ತದೆ.
- ಸರಳವಾದ ಭಾಷೆಯಲ್ಲಿ ಶಿವಶರಣರ ಭಕ್ತಿ ಭಾವವನ್ನು ವಿಕಾಸಗೊಳಿಸಿದ ವಿಸ್ತಾರವಿದು.
- ಆಧ್ಯಾತೀತ ವೈಧ್ಯ ವಿಜ್ಞಾನ ಆಧುನಿಕ ವೈಧ್ಯ ವಿಜ್ಞಾನ ಸತ್ಯಾಂಶಗಳುನ್ನೊಳಗೊಂಡ ಶ್ರೇಷ್ಠ ವೈದ್ಯ ಕೃತಿ ಇದಾಗಿದೆ.
- ಅನುಭವಿಸಿ ಆಧರಿಸಿ ಆದರ್ಶ ಮೆರೆಯುವ ಕೃತಿ ಇದಾಗಿದೆ.
- ಸ್ಥೂಲ, ಸೂಕ್ಷ್ಮ, ಕಾರಣ ಅರಿವಿನಮನೆ, ಅಡುಗೆಯ ಮನೆ, ಬಚ್ಚಲು ಮನೆ ತ್ರಿಭಾವಾಗಳನ್ನು ವ್ಯಕ್ತಿ ಪಡಿಸುವ ಕೃತಿ ಇದಗಿದೆ.
- ಕರಣ ಎಂದರೆ ತತ್ವಗಳು, ಹಸಿಗೆ ಎಂದರೆ ವಿಭಾಗಗಳು. ಸ್ಥಾವರ ಮತ್ತು ಜಂಗಮತ್ವವನ್ನು ಒಂದೇ ತಳಹದಿಯಲ್ಲಿ ಅಭಿವ್ಯಕ್ತಿಗೊಳಿಸುವ ಕೃತಿ ಇದಾಗಿದೆ.
- ಪ್ರಕೃತಿಯ ಆಧಾರ ಪ್ರಾಣಗಳ ಸಹಕಾರ, ಆಕಾರ ಉಕಾರ ಮಕರಗಳನ್ನು ನಾದಬಿಂದು, ಕಳಾತೀತ ಕೃತಿಯಲ್ಲಿ ಅಭಿವ್ಯಕ್ತಿ ಪಡಿಸುವ ಕೃತಿ ಇದೆ.
- ನವದ್ವಾರಗಳನ್ನು ಪಂಚೇಂದ್ರಿಯಗಳನ್ನು ಮಲತ್ರಯಗಳನ್ನು ಗುಣ ತ್ರಯಗಳನ್ನು ನಿಜಸ್ತಿತಿಯಲ್ಲಿ ಅಭಿವ್ಯಕ್ತಗೊಳಿಸುವ ಕೃತಿ.

## ಅಡಿ ಟಿಪ್ಪಣಿ

### ಕರಣ ಹಸಿಗೆಯ ಅರ್ಥ ಹಾಗೂ ಲಕ್ಷಣ

೧) ಡಾ. ಎಸ್.ವಿ. ಅಯ್ಯನಗೌಡರ ಮೈಲಾರ ಬಸವಲಿಂಗ ಶರಣರ ಜೀವನ ಹಾಗೂ ಸಮಗ್ರ ಕೃತಿಗಳ ದರ್ಶನ ಅವರ ಪಿ.ಹೆಚ್.ಡಿ. ಮಹಾಪ್ರಬಂಧದ ಪುಟ ೨೬೪, ೨೬೫, ೧೯೮೩

೨) ಅನಾದಿ ವೀರಶೈವ ಸಂಗ್ರಹ : ಸಂ. ಜಿ.ಎಸ್. ಶಿವಲಿಂಗಯ್ಯ, ಬಸವಸಮಿತಿ, ಬೆಂಗಳೂರು, ೧೯೯೯, ಪುಟ : ೧೮೮

೩) ಡಾ. ಎಸ್.ವಿ. ಅಯ್ಯನಗೌಡರ ಮೈಲಾರ ಬಸವಲಿಂಗ ಶರಣರ ಜೀವನ ಹಾಗೂ ಸಮಗ್ರ ಕೃತಿಗಳ ದರ್ಶನ ಅವರ ಪಿ.ಹೆಚ್.ಡಿ. ಮಹಾಪ್ರಬಂಧ, ಪುಟ ೧೬೫ ರಿಂದ ೧೭೧ರ ವರೆಗೆ ತೆಗೆದುಕೊಳ್ಳಲಾಗಿದೆ. ೧೯೮೩

೪) ವೀರಶೈವ ತತ್ತ್ವ ಮತ್ತು ಆಚರಣೆ : ಸಂ. ಡಾ. ಎಲ್. ಬಸವರಾಜು, ಶ್ರೀ ಬೃಹನ್ಮಠ ಸಂಸ್ಥಾನ, ಚಿತ್ರದುರ್ಗ, ೧೯೮೨, ಪುಟ ೫೨.

೫) ವೀರಶೈವ ಲಘು ಸಾಹಿತ್ಯ ಪ್ರಕಾರಗಳು, ಈ ಅಪ್ರಕಟಿತ ಕೃತಿಯಿಂದ ಪುಟ ೬೮ ರಿಂದ ೭೨ರ ವರೆಗೆ ಸಂಶೋಧಕರಾದ ಶ್ರೀ ಆರ್.ವಿ. ಪಾಟೀಲರವರಿಂದ ಕನ್ನಡ ವಿಷಯದಲ್ಲಿ ಪಿ.ಹೆಚ್.ಡಿ. ಪದವಿಗಾಗಿ, ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ ಸಂಶೋಧನ ಮಹಾಪ್ರಬಂಧ.

## ಅಧ್ಯಾಯ–೪

# ಕರಣ ಹಸಿಗೆಯ ವಸ್ತು ವಿಷಯ

೧.೧. ಕರಣ ಹಸಿಗೆಯ ವಸ್ತು

೧.೨. ಕರಣ ಹಸಿಗೆಯ ವಿಷಯ

# ೪. ಕರಣ ಹಸಿಗೆಯ ವಸ್ತು ವಿಷಯ

"ಕರಣ" ಎಂದರೆ "ತತ್ವ" "ಹಸಿಗೆ" ಎಂದರೆ "ವಿಭಾಗ" ದೇಹ ತತ್ವಗಳ ವಿಭಾಗಗಳನ್ನು ಚೆನ್ನ ಬಸವಣ್ಣನವರು ಶರಣರ ಸಂಪ್ರದಾಯಕ ಭಾವದಂತೆ ಪ್ರಾಣಪ ಉತ್ಪತ್ತಿಯನ್ನು ಕುರಿತು ಚರ್ಚಿಸಿದ್ದಾರೆ. ಇಲ್ಲಿಂದಲೇ ಸೃಷ್ಟಿ , ಲಯ, ನಾಪ, ಬಿಂದು, ಕಳೆ, ಪ್ರಾರಂಭವಾಗುವುದು , ಸರ್ವಶಕ್ತ ಈ ಜಗತ್ತಿನ ಬೆಳಕು, ಕ್ರಿಯೆ, ಕಾರ್ಯಚಲನ ಪಲನ ಸರ್ವವುಗಳ, ಪ್ರಾರಂಭ ಇಲ್ಲಿಂದಲೆ ಆಗುವುದು. ಅಂತಹ ಓಂಕಾರ ಉತ್ಪತ್ತಿ ಹೇಗಾಗಿದೆ ಎನ್ನುವುದನ್ನು ಚೆನ್ನಬಸವಣ್ಣನವರು ಇಲ್ಲಿ ನಿರೂಪಿಸಿದ್ದಾರೆ.

**'ಓಂಕಾರ' ಪ್ರಣಪದಲ್ಲಿ**




ಈಗೆ "ಅ" ಕಾರ "ಉ" ಕಾರ, "ಮ" ಕಾರಗಳಿಗೆ ಆಧಾರ ನಾದಬಿಂದು ಕಳೆಗಳು ಈ ನಾದ, ಬಿಂದು, ಕಳೆಗಳಿಗೆ , ಆಧಾರ ಪ್ರಕೃತಿ ಈ ಪ್ರಕೃತಿಗೆ ಆಧಾರವಾಗಿರುವುದು ಪ್ರಾಣ, ಈ ಪ್ರಾಣಕ್ಕೆ ಆಧಾರಲಿಂಗ ಲಿಂಗವೇ ಸರ್ವ ಇದು ಪಂಚಿಕೃತಿಗಳನ್ನೊಳಗೊಂಡ ಓಂಕಾರವು ಸತ್ವ, ರಜ, ತಮ ಗುಣ ಹೊಂದಿದ ಸತ್ ಚಿತ್ ಆನಂದ ರೂಪವಾಗಿದೆ, ಇಲ್ಲಿ ಎರಡು ಮುಖಗಳುಂಟು, ಬಿಂದು ಅಧೋಮುಖ 'ಗಿ' ನಿವೃತ್ತಿಯಾಗಿರುವುದು ಮತ್ತೊಂದು ಉರ್ದ್ವೋಮುಖ ' ' ಪ್ರವೃತ್ತಿಯಾಗಿದ್ದು ಹೇಗೆ ಇಪ್ಪಾಗ ಶೂನ್ಯಕಾರ ಹೊಂದಿ (O) ಕೆಳಗಿನಂತೆ ಆಗಿರುವುದು, ಹೀಗೆ ಅದೋಮುಖ ಪೀಠ, ಉರ್ದ್ವಮುಖ ಪೀಠದ ಮಧ್ಯಭಾಗವೇ ಗೋಮುಖ ಇದು "ತಾರ (O), (∩) ಕುಂಡಲಿ (ಎ) ಅರ್ಧಚಂದ್ರ (ಗ) ಬಿಂದು (.) ಎಂಬ ಪಂಚಾಕೃತಿಗಳಿಂದ ಕೂಡಿದ, ಇದು 'ನಮಃ ಶಿವಾಯ' ಅಕ್ಷರಗಳಿಗೆ ಚಿಹ್ನೆಯಾಗಿಯೂ ಎಂಬ ಅಕ್ಷರದಲ್ಲಿನ ಪಂಚವರ್ಣಗಳ ಚಿಹ್ನೆಯಾಗಿದೆ. ಇವೆಲ್ಲವುಗಳಿಂದ ಕೂಡಿದ "ಓಂ" ಕಾರವೇ ಲಿಂಗವಾಗಿದೆ. ಈ ಲಿಂಗದೊಳಗೆ ಜಗತ್ತು ಜಗತ್ತಿನಲ್ಲಿಯೆ ಜೀವಕಾಶಿಗಳು ಈ ಜೀವ ರಾಶಿಗಳು ಮೋಕ್ಷವೊಂದಲು ಲಿಂಗಧ್ಯಾನ, ಲಿಂಗಪೂಜೆಯೊಂದಿಗಿನ ವಿಷಯವನ್ನು ಕುರಿತಾದ ವಿಷಯ ಹೀಗಿರುವುದು, 'ಶರಣನ ಪದ್ಮಾಸನವೇ ಪೀಠ' ಅವನ ಶಿರವೇ ಗೋಳಕ ಮುಂದೆ ಚಾಚಿದ ಲಿಂಗದ ಹಿಡಿದ ಪಾಮಕರವೇ ಗೋಮುಖ (ಜಲಹರಿ)ವಾಗಿ

ಕಾಣುವುದರಿಂದ ಈ ಪಿಂಪಾಂಡದ ಆಕಾರದಲ್ಲಿ ಪಂಚಸೂತ್ರ ಲಿಂಗವನ್ನು ವೀರಶೈವರು ರಚಿಸಿದ್ದಾರೆ. ಇಸ್ಟಲಿಂಗದಲ್ಲಿ ಪದಾರ್ಥ (ವಿಜ್ಞಾನ) ಕರ್ಷಣ , ಶಕ್ತಿ, ವಿದ್ಯುಚ್ಛಕ್ತಿ, ಆರೋಗ್ಯ ಪ್ರಧಾನಶಕ್ತಿ, ಅಣಿಮಾಧಿ ಸಿದ್ದೀಕರಣ ಶಕ್ತಿ ಮುಕ್ತಿದಾಯಕ ಶಕ್ತಿಗಳಿವೆ" ೫೬ ಎಂದು ಅಕ್ಕುಲಯ್ಯ ದೀಕ್ಷಿತರು ತಮ್ಮ ಇಸ್ಟಲಿಂಗ ವಿಜ್ಞಾನದಲ್ಲಿಯೆ ಹೇಳಿರುವರು.

ಬ್ಯಾಟರಿ (Battery) – ಇಸ್ಟಲಿಂಗ

ಧನುದ್ರುವ (Positive Pole) – ಇಸ್ಟಲಿಂಗ ಶಿರ

ಋಣದ್ರುವ (Negative Pole) – ಇಸ್ಟಲಿಂಗ ಗೋಮುಖ

ಧನುದ್ರುವ ಸಂಬಂಧಿನಿ (Positive Lip) – ಅಸಾಮಿಕಾಂಗುಲಿ

ಋಣದ್ರುವ ಸಂಬಂಧಿನಿ (Negative Lip) – ಅಂಗುಷ್ಠ

ಏಕೀಕರಣ (Adoper) – ಬಾಹು

ವಾಹಕಗಳು (Wire) – ನರಗಳು

ಪ್ರಕಾಶನಳಿಕೆ (Bulb) – ಪ್ರಾಣಲಿಂಗ

ಅರ್ಕಲ್ಯಾಂಪ್ (Arch Lamp) – ಬಾಪಲಿಂಗ

ಸಂಪೂರ್ಣ ವಿದ್ಯುತ್ ಪ್ರಕಾಶ (Electricity) – ಸರ್ಪಾಂಗಲಿಂಗ

ಸಂದಾಯಿನಿ (Switch) – ದೃಷ್ಟಿ " ೬೦

ಹೀಗೆ ಲಿಂಗವು ವಿದ್ಯುತ್ ಬ್ಯಾಟರಿಯಂತೆ ಮನುಷ್ಯನಿಗೆ ಪ್ರಕಾಶ ಮಾನವಾದ ಬೆಳಕನ್ನು ನೀಡುವ ದಿವ್ಯ ಚೇತನವಾಗಿದೆ ಪ್ರಕೃತಿಗೆ ಈ ಲಿಂಗವೇ ಆಧಾರ 'ಅ' ಎಂದರೆ ಅನಾಹತ 'ಉ' ಎಂದರೆ ಸಾದವು ಇಳಿಯಿತ್ತು 'ಮ' ಎಂದರೆ ಬಿಂದು ಒಂದು ಕೂಡುವುದು ಹೀಗೆ ಕೂಡಿಸಿದಾಗ ಶಿವಶಕ್ತಿಯಾಗುವುದು. ಇದೇ 'ಓಂ' ಕಾರವಾಗಿ ಹುಟ್ಟಿಕೊಂಡಿತ್ತು ಈ 'ಓಂ' ಕಾರ ಪ್ರಣವವು ಐಕ್ಯ ಸ್ಥಳವೆಂಬ ಭುಜಂಗನಿಗೆ ಭಾವನ್ನ (೬೨) ವೃಕ್ಷವಾಗಿದ್ದು, ಅದಕ್ಕೆ ೮೬೪ ಲಿಂಗಮಂತ್ರಗಳನ್ನು ಗರ್ಭಿಕರಿಸಿಕೊಂಡು ಸಹಸ್ರ ಕೋಟಿ ಸೂರ್ಯ, ಚಂದ್ರ, ಅಗ್ನಿಯ ಪ್ರಕಾಶಕ್ಕಿಂತ ಹೆಚ್ಚಾಗಿ ಚಿತ್‌ಘನ ಇಸ್ಟ ಮಹಾಜ್ಯೋತಿರ್ಲಿಂಗದ ಗೋಳಕದಲ್ಲಿ ನೆಲೆಸಿರುವುದಕ್ಕೆ "ಓಂಕಾರ" ಪ್ರಣವ ಎಂದು ಅದನ್ನು ಕರೆಯುವರು ಇದೇ ಪರಾತ್ಪರ ವಿಶ್ವಸೃಷ್ಟಿಕರ್ತ– ಶಿವ ಈ ಶಿವಸ್ವರೂಪಿಯಾದ "ಓಂ'ಕಾರ ಪ್ರಣವದಿಂದಲೇ ಜಗತ್ತು ಉತ್ಪತ್ತಿಯಾಗಿರುವುದು ಈ "ಓಂ"ಕಾರದಲ್ಲಿ ಶಿವ ಶಕ್ತಿಯ ಸಂಯೋಗದಿಂದ ಸೃಷ್ಟಿಯಾಗಿದೆ ಎಂದು ವೀರಶೈವತತ್ವ ನಿರೂಪಿಸಿರುವುದು ಚಿತ್‌ಘನಸಾದವೇ 'ಅ'ಕಾರ ಚಿದ್‌ಘನ ಬಂದವೇ 'ಉ' ಕಾರ ಚಿದ್‌ಘನ ಕಳೆಯೇ 'ಮ' ಕಾರ ಈ ಚಿದ್ ಘನಗಳ ಶಕ್ತಿಯು ಸಮ್ಮಿಲನವಾಗಿ ನಾದ–ಬಿಂದು– ಕಲಾ ರೂಪದ 'ಓಂ' ಕಾರ ಮೂಲ ಮಂತ್ರವಾಗಿರುವುದು.

# ಬುದ್ಧೀಂದ್ರಿಯಗಳು

(೧) ಇನ್ನು ಬುದ್ಧೀಂದ್ರಿಯಗಳ ವಿಷಯ :- ಸದ್ಭೂತಾದಿ ದೇವತಾ ಸುಕರ್ಮವೆಂತೆಂದೊಡೆ "ಶ್ಲೋಕ" ಶೋತ್ರಂ ತಜ್ಞೇತ್ರ ಜಿದ್ವಾಂಚ ಘ್ರಾಣಂ ಪಚೇಂದ್ರಿಯಾಣಿ ಚ। ಆಕಾಶು ವಾಯುರಗ್ನಿಶ್ವಪಯ ಪೃಥ್ವಿ (೦) ಕ್ರಮೇಣ 'ಚ' ಎಂದು ಶೋತ್ರ, ತ್ವಕ್ಕು ನೇತ್ರ, ಜಿಹ್ವೆ , ಘ್ರಾಣ ಈ ಐದು ಜ್ಞಾನೇಂದ್ರಿಯಂಗಳು ಇದಕ್ಕೆ ವಿವರ.

ಶ್ರೋತ್ರಿಂದ್ರಿಯಕ್ಕೆ ಆಕಾಶವೆಂಬ ಮಹಾಭೂತ, ದಶದಿಕ್ಕಧಿದೇವತೆ, ಅಲ್ಲಿ ಶಬ್ಧ ವಿಷಯ, ಅಕ್ಷರಾತ್ಮಕ ಅನಕ್ಷರಾತ್ಮಕ ಈ (ಎರಡು) ಶಬ್ಧಬೇದ

ತ್ವಗಿಂದ್ರಿಯಕ್ಕೆ ವಾಯುವೆಂಬ ಮಹಾಭೂತ, ಚಂದ್ರನಧಿದೇವತೆ, ಅಲ್ಲಿ ಸ್ಪರ್ಶಸ ವಿಷಯ ಅಕ್ಷರಾತ್ಮಕ, ಅನಕ್ಷರಾತ್ಮಕ ಈ (ಎರಡು) ಶಬ್ಧಜೀವ.

ತ್ವಗಿಂದ್ರಿಯಕ್ಕೆ ವಾಯುವೆಂಬ ಮಹಾಭೂತ ಚಂದ್ರಸಧಿದೇವತೆ, ಅಲ್ಲಿ ಸ್ಪರ್ಶನ ವಿಷಯ ಶೀತ, ಉಷ್ಣ , ಮೃದು, ಕಠಿಣ ಈ ನಾಲ್ಕು ಸ್ಪರ್ಶನ ಬೇಧ.

ನೇತ್ರೇಂದ್ರಿಯಕ್ಕೆ ಅಗ್ನಿ ಎಂಬ ಮಹಾಭೂತ, ಸೂರ್ಯಸಧಿದೇವತೆ, ಅಲ್ಲಿ ರೂಪು, ವಿಷಯ ಪೀತ (ಶ್ವೇತ) ಮಾಂಜಿಷ್ಟ , ಹರಿತ, ಕಪೋಟ, ಕೃಷ್ಣ ಈ ಆರು ರೂಪಜೀವ.

ಜಿಹೇಂದ್ರಿಯಕ್ಕೆ ಅಪ್ಪವೆಂಬ ಮಹಾಭೂತ (ವ) ರುಣಸಧಿದೇವತೆ, ಅಲ್ಲಿ ರಸ ವಿಷಯ ಮಧುರ, ಕಟು, ತಿಕ್ತ, ಆಮ್ಲ, ಕಷಾಯ ಲವಣ ಈ ಆರು ರಸಭೇದ.

ಪ್ರಾಣೇಂದ್ರಿಯಕ್ಕೆ ಪೃಥ್ವಿವೆಂಬ ಮಹಾಭೂತ, ಅಶ್ವಿನಧಿದೇವತೆ . ಅಲ್ಲಿ ಗಂಧ ವಿಷಯ, ಸುಗಂಧ, ದುರ್ಗಂಧ ಈ ಎರಡು ಗಂಧ ಭೇದ.

ನವಮಾಸಕ್ಕೆ ಶ್ರೋತ್ರಾದಿಗಳೈದು, ಶಭ್ದಾದಿಗಳೈದು, ಮಂಡಲ ಮೂರು ಗುಣಮೂರು, ವ್ಯಾದಿಮೂರು, ಈಷಣಮೂರು, ನಾಡಿಹತ್ತು, ವಾಯು ಹದಿನಾಲ್ಕು ಕ್ಲೇಷಂಗಳೈದು, ಘಾತುಗಳೇಳು, ಮದವೆಂಟು, ಸುಖ ದುಃಖಂಗಳೆರಡು, ಎಪ್ಪತ್ತೆರೆಡು ಸಾವಿರ ನಾಡಿಗಳು, ಎಂಬತ್ತೆಂಟು ಕೋಟಿರೋಮದ್ವಾರಗಳು, ಎಂಬಾತ್ನಾಲ್ಕು ನೂರು ಸಾವಿರ ಸಂದುಗಳು ಇಪ್ಪತ್ತೊಂದು ಸಾವಿರವಾರು ನೂರು ಶ್ವಾಸಂಗಳು, ಮೂವತ್ತೆರಡು ಲಕ್ಷಣಗಳು, ಐವತ್ತಾರಕ್ಷರಂಗಳು , ಅರುವತ್ನಾಲ್ಕು ಕಲೆ, ಜ್ಞಾನಂಗಳು ಕೂಡಿ ಸುಜ್ಞಾನ ಸಂಪನ್ನಾಗಿ ಪೂರ್ವ ಜನ್ಮದಲ್ಲಿ ಎಂಬತ್ನಾಲ್ಕು ನೂರು ಸಾವಿರ ಜನ್ಮದಲ್ಲಿ ಬಂದ ಜನ್ಮದ ವಿವೇಕಿಸುತ್ತಿರುವುದು ನೋಡಾ ಅದೆಂತೆಂದಡೆ ಮಾನವ ಜನ್ಮ ಒಂಭತ್ತು ಸಾವಿರ ಜನ್ಮ ಉರುವ ಜೀವ ಜನ್ಮಹನ್ನೊಂದು ಸಾವಿರ ಜನ್ಮ, ಜಲಜರ ಜೀವ ಜನ್ಮದಲ್ಲಿ ಎಂಬತ್ನಾಲ್ಕು ನೂರು ಸಾವಿರ ಜನ್ಮದಲ್ಲ ಹತ್ತು ಸಾವಿರ ಜನ್ಮ ಹಾರುವ ಪಕ್ಷಿಗಳ ಜೀವಜನ್ಮದಲ್ಲಿ ಹತ್ತು ಸಾವಿರ ಜನ್ಮ ಚತುಷ್ಪದ ಜೀವಕಾಶಿಗಳ ಜನ್ಮದಲ್ಲಿ ಹತ್ತು ಸಾವಿರ ಜನ್ಮ ದೈತ್ಯ ಜೀವಜನ್ಮದಲ್ಲಿ ಹದಿನಾರು ಸಾವಿರ ಜನ್ಮ ಸ್ಥಾಪರಂಗಳ ಜನ್ಮದಲ್ಲಿ ಹದಿನೆಂಟು ಸಾವಿರ ಜನ್ಮ ಇಂತು ಎಂಬತ್ನಾಲ್ಕನೂರು ಜನ್ಮ ಅಂಡಜ ಸ್ವೇದಜ ಉದ್ದಿಜ ಜರಾಯುಜವೆಂಬ ನಾಲ್ಕು ಯೋನಿಯಲ್ಲಿ ಜನಿಸಿದನು. ಇನ್ನು ಹುಟ್ಟದಾಕ್ಷಣದಲ್ಲಿಯೆ ಮರಣ,

ಮರಣಪಾಕ್ಷಣದಲ್ಲಿಯೇ ಜನನವೆಂಪರಿದು ಸ್ಮರಿಸುತ್ತಿರುವುದು ನೋಟಾ ಇದಕ್ಕೆ ಈಶ್ವರ ಉಪಾಟ "ಮಾಸೇಕಂ ನವಮೋ ಪ್ರಾಪ್ತೇ ಗರ್ಭೇತ ತತ್‌ಸ್ಮರತಿ ಸ್ವಯಂ ಮತಸ್ಯಾಹಂ ಪುಸರ್ಜಾತಃ ಜಾತಸ್ಯಾಹಂ ಮೃತಃ ಪುನಃ ನಾನಾ ಯೋನಿ ಶ್ರೇಷುಮಯಾ ದೃಷ್ಟಮನೇಕಶಃ ॥ ಇಂತೆಂದುಪಾಗಿ, ಅಪ್ರಾಮಾಣ ಕೂಡಲಸಂಗಮದೇವಾ ಎಂಬ ಈ ವಚನವನ್ನು ಬಾಲ ಸಂಗಯ್ಯನ ವಚನವಾಗಿರುತ್ತದೆ. ಈ ವಚನವನ್ನು ಸಮಗ್ರ ವಚನಸುಂಪುಟ ೧೧೦-೧೧೧ ನೇ ಪುಟದಲ್ಲಿ ಈ ಕರಣ ಹಸಿಗೆಯ ವಚನವು ವ್ಯಕ್ತವಾಗಿರುವಂತದ್ದು. ಮನುಷ್ಯ ಜೀವ ಅನೇಕ ಯೋನಿಗಳಲ್ಲಿ ಒಂದು ನಾಟಕ ಈ ಮಾನವ ಜನ್ಮಪಾಗಿರುವಂತದ್ದು ೮೪ ಸಾವಿರ ಜೀವಕಾಶಿಗಳಲ್ಲಿ ಮಾತುಳ್ಳ ಕ್ರಿಯೆಯನ್ನು ವ್ಯವಹರಿಸುವ ಜ್ಞಾನಶಕ್ತಿ ವಿಚಾರ ವಿನಿಯಮ ಮಾಡುವ ಶಕ್ತಿಯನ್ನು ಮನುಷ್ಯ ಪಡೆದುಕೊಂಡಿದ್ದೇನೆ. ಮನುಷ್ಯನ ನವಸ್ವರಗಳು ಹರಿಷಡ್‌ವರ್ಗಗಳು ಮಲತ್ರಯಗಳು, ಗುಣತ್ರಯಗಳು, ಭಾವಿಂದ್ರಿಯಗಳು , ಶಿವತೇಂದ್ರಿಯಗಳು, ಮಂಪಲಗಳು, ಸುಜ್ಞಾನಸಂಪತ್ತುಗಳು ಅನೇಕ ಬಿನ್ನಗಳ ಆಯಾಮಗಳನ್ನು ಈ ವಚನಗಳಲ್ಲಿ ನಾನು ಕಾಣುತ್ತೇನೆ. ಭವ ಭವಾಂತರದಲ್ಲಿ ಶರೀರದ ಜಾಗ್ರ, ಸ್ವಪ್ನ, ಸುಸುತ್ತಿಯಾ ಸ್ಥೂಲ, ಸೂಕ್ಷ ಕಾರಣದ ಅನೇಕ ನಾಡಿಗಳನ್ನು ಧಾತುಗಳನ್ನು ವ್ಯಾಧಿಗಳನ್ನು , ಗುಣಗಳನ್ನು ಮಂಡಲಗಳನ್ನು ಜಲಚರ ಜೀವಾತ್ಮಗಳನ್ನು ಒಂದು ಮಾಡಿದ ಜೀವರಾಶಿಗಳ ಸ್ಥಾವರ ಜನ್ಮದಲ್ಲಿ ಜಂಗಮ ಜನಮದಲಿ ಉರ್ದೋಮುಖ ಮತ್ತು ಅದೋಮುಖ ಈ ಎಲ್ಲಾ ತತ್ವಗಳನ್ನು ಕರಣ ಹಸಿಗೆಯಲ್ಲಿ ನಾವು ಅಂತರಂಗ ಬಹಿರಂಗದಿಂದ ಕಾಣುತ್ತೇವೆ.

ಈ "ಓಂ" ಕಾರ ಪ್ರಣವ




ಎಂಬ ನಿಯಮ ಪ್ರಣವವಾಗುವುದು




"ಅ" ಎಂದರೆ ಅನಾಹತ

ಅ– ಉಚ್ಚಾರಣೆಯನ್ನು ಯಾವುದೇ ಒತ್ತಾಯವಿಲ್ಲದೆ ಉಸಿರಿನೊಂದಿಗೆ ಸೇರಿ ಬರ ಮಾಡಿಕೊಂಡು ಹೇಳುವುದು.

ಉ– ನಾದವನ್ನು ಉಸಿರನ್ನು ಹೊರಗೆ ಬಿಟ್ಟು ಆ ಉಸಿರಾದಂತೆ ಧ್ವನಿ ಇಳಿದು ನಾದ (ಶಬ್ಧ) ಇಳಿಯುತ್ತಾ ಹೋಗುವುದು.

ಮ– ಬಿಂದು ಉಚ್ಚರಿಸುವಾಗ ತುಟಿಗಳು ಗೋಳಾಕಾರವಾಗಿ ಮುಚ್ಚಿಸಾವಕಾಶವಾಗಿ ತೆರೆಯುವುದು ಹೇಗೆ ಉಸಿಕಿನೊಂದಿಗೆ ಸೇರಿ ಒಂದಾಗಿ ಹುಟ್ಟುವುದು "ಓಂ" ಪ್ರಣವ ಈ ಓಂ ಎಂಬ ಉಚ್ಚಾರಣೆ ಗೋಲಾಕಾರ ಅಥವಾ ಅಂಡಕಾರವಾಗಿ ಉಚ್ಚರಿಸಲ್ಪಟು ಇದರ ರೂಪವಾಗಿ ಲಿಂಗ ಹುಟ್ಟಿ ಅಪಾರ ರೂಪವಾಗಿ ಜಗತ್ತು ಹುಟ್ಟಿರುವುದು ಅದನ್ನೇ 'ಬ್ರಹ್ಮ ಸೃಷ್ಟಿ' ಅಂಡ ರೂಪವಾಗಿರುವುದಕ್ಕೆ "ಬ್ರಹ್ಮಾಂಡ" ವೆಂದು ಕರೆಯಬಹುದಾಗಿದೆ. ಹೀಗೆ "ಓಂ"ಕಾರದ ಮಹಿಮೆ ಅಪಾರ ಇದರೊಳಗಡೆ ಲಿಂಗಾಯಿತ ತತ್ವ ಸಿದ್ಧಾಂತವಿರುವುದನ್ನು ತಿಳಿಸಿಕೊಟ್ಟವರು ಶ್ರೀಗುರು ಚೆನ್ನ ಬಸವಣ್ಣನವರು.

ಆದರೂ ಈ ೩೬ ಸ್ಥಳಗಳ ಮೂಲ ತತ್ವಗಳನ್ನು ನಾವು ಸಾಮಾನ್ಯವಾಗಿ ಕಂಡುಹಿಡಿಯುವುದು ಸಂಖ್ಯವಿರುತ್ತವೆ. ಪ್ರತಿಯೊಂದು ಸ್ಥಳದಲ್ಲಿ ಪುನಮ್ ಆರು ಸ್ಥಳಗಳು ಅಂತರ್‌ಗತವಾಗಿದ್ದು ಇವುಗಳ ಪರಸ್ಪರ ಜೀವಭಾವನೆಗಳನ್ನು ನಾವು ಸ್ಥೂಲವಾಗಿ ಕಂಡು ಹಿಡಿಯಬಹುದಾಗಿದೆ. ಈ ಬಗ್ಗೆ ಕೆಲವು ವಚನಗಳು ದೊರೆಯುತ್ತದ್ವೆ, ಇವುಗಳನ್ನು ನಾವು ಆರಂಭದಲ್ಲಿ ಕೊಟ್ಟಿರುತ್ತೇವೆ. ಉದಾಹರಣೆ :– ಪೃಥ್ವಿ, ತೇಜ, ವಾಯು, ಆಕಾರ, ಚಂದ್ರ, ಸೂರ್ಯ, ಆತ ರೆಂಬ, ಅಷ್ಟತನಮೂರ್ತಿ , ಸ್ವರೂಪಗೊಳ್ಳವಂದು ನಾನು ನೀನು ಎಂಬ ಬ್ರಾಂತಿ ಸೂತಕ ಮಟದಂದು ನಾಮ ರೂಪ ಕ್ರಿಯೆಗಳನ್ನು ಇಲ್ಲವೆಂದು ಸರ್ವಶೂನ್ಯ ನಿರಾಲಾಂಬನಾಗಿದ್ದೆಯಲ್ಲ ನೀನು ಮಹಾಲಿಂಗ ಗುರು, ಶಿವ, ಸಿದ್ದೇಶ್ವರ, ಪ್ರಭುವೆ ಈ ವಚನದಲ್ಲಿ ಪಂಚಭೂತಗಳನ್ನು ಕುರಿತು ಸರ್ವ ಶೂನ್ಯ ನಿರಾಂಬನಾದ ಪರಮಾತ್ಮನನ್ನು ಪೃಥ್ವಿ, ಅಪ್ಪು, ತೇಜ, ವಾಯು, ಆಕಾಶದಲ್ಲಿ ಕಾಣುತ್ತಾ ಪ್ರತ್ಯೇಕವಾಗಿ ರಂಪರೆ ರಾಜ್ಯ ಮೂರ್ತಿ ಅಪ್ರತ್ಯಕ್ಷವಾದರೆ ನಿರಂಜನಮೂರ್ತಿ

ಎಂಬ ಆತ ಆತ್ಮಗಳ ನಾನಾ ರೂಪ ಕ್ರಿಯೆಗಳನ್ನು ಮಹಾಲಿಂಗವಾರಿವ ನಿಶೂನ್ಯ ನಿರಾಳದಲ್ಲಿ ತೋಟದ ಸಿದ್ದಲಿಂಗೇಶ್ವರರು ಕೂರ್ಯತೀತ ನೆಲೆಗಪ್ಪಿಯಲ್ಲಿ ಕಾರಣ ಅಸಿಗೆಯ ಮಹತ್ವವನ್ನು ಈ ಕಾರಣ ಅಸಿಗೆಯಲ್ಲಿ ಹೇಳಿದ್ದಾರೆ. ಲಿಂಗಾ ಅಂಗಾಂಗಳ ಸಾಧಕ (ಲಿಂಗಾಂಗ ಸಾಧಕ) ಒಂದೇ ಒಂದು ಸ್ಥಳದಲ್ಲಿ ಅಂಟಿಕೊಂಡಿದ್ದರೆ ಅದು ಪ್ರಗ್ತಿಗೆ ಕಾರಣವಲ್ಲವೆಂದು ವಚನಕಾರರ ಅಭಿಪ್ರಾಯಗಳಿವೆ. ಇದರಿಂದ ಒಂದು ಬಗೆಯ ಶಕ್ತಿ, ಭಕ್ತಿ, ಲಿಂಗಗಳು ಉತ್ಕೃಷ್ಟತೆಯನ್ನು ಹೊಂದುತ್ತದೆ. ಇದು ಪೂರ್ಣತೆಯಲ್ಲಿ ಆದ್ದರಿಂದ ಒಂದು ಸ್ಥಳದಲ್ಲಿದವನು ಉಳಿದ ಸ್ಥಳಹಾಳಲ್ಲಿಯೂ ದೃಷ್ಟಿಯನ್ನಿಪ್ಪ ಆಚರಿಸಬೇಕು, ಇದರಿಂದ ಮನುಷ್ಯನಲ್ಲಿಯ ಎಲ್ಲಾ ಗುಣಗಳ ವಿಕಾಸವನ್ನು ಹೊಂದುತ್ತದೆ. ಉದಾ:- ಆಚರವೇ ಮುಖ್ಯವಾಗಿದ್ದ ಭಕ್ತನು ಆ ಆಚಾರದ ಜ್ಞಾನವನ್ನು ಆಚರಣೆಯಲ್ಲಿ ತಂದುಕೊಂಡು ಶರಣನ ಭಕ್ತಿಸಾಗಲು ಬೇಕು. ಶ್ರದ್ಧೆಯುಳ್ಳವನು ಯಾವಾಗಲು ಶ್ರದ್ಧೆಯಲ್ಲಿಯೇ ಇರಬಾರದು, ಈ ಶ್ರದ್ಧಾಭಕ್ತಿಯೊಡನೆ ಬೇರೆ ಸ್ಥಲಗಳಿಗೆ ಸಂಬಂಧಿಸಿದ ಅವಘಾನ ಭಕ್ತಿ, ಸುಜ್ಞಾನ ಭಕ್ತಿ, ಮೊದಲಾದವುಗಳನ್ನು ಹೊಂದಬೇಕು. ಹೀಗೆ ಭಕ್ತನು ಆರು ಸ್ಥಲಗಳಲ್ಲೆಲ್ಲ ನಿಂತು ಅಲ್ಲಿಲ್ಲಿಯ ಆಚರಣೆಗಳನ್ನೆಲ್ಲಾ ಆಚರಿಸುತ್ತಾ ಹೋಗಬೇಕು.

| ಐಕ್ಯ ಸ್ಥಲ |
| --- |
| ಶರಣ ಸ್ಥಲ |
| ಪ್ರಾಣಲಿಂಗ ಸ್ಥಲ |
| ಪ್ರಸಾವ ಸ್ಥಲ |
| ಮಹೇಶ ಸ್ಥಲ |
| ಭಕ್ತ ಸ್ಥಲ |

ಈ ಪ್ರಕಾರ ಭಕ್ತ ಮಹೇಶ ರಂಜನೆಯುಳ್ಳ ಮೂರ್ತಿಯ ಪೂಜಕರಾಗಿರುತ್ತಾರೆ. ಅದರಲ್ಲಿಯೇ ಆನಂದವನ್ನು ಕಂಡುಕೊಂಡು ಅದರಲ್ಲಿ ಸತ್ಯದ ದೈಪತ್ವವನ್ನು ಕಾಣದಸ್ ನಂತರ ರಂಜನೆಯನ್ನು ಬಿಟ್ಟು ಹೂಬು,ಪೀಚಾಗುವ ರೀತಿಯಲ್ಲಿ ಕಾಲಕ್ರಮೇಣ ಪ್ರಸಾದಿ ಪ್ರಾಣಲಿಂಗಿಯಾಗಿ ಮೂರ್ತಿ ಪೂಜೆಯ ತೊರೆದು ಈ ಸ್ವಲಿಂಗಾರ್ಚನೆಯನ್ನು ಮಾಡುವ ಯೋಗಿಯಾಗುವನು ಇಲ್ಲಿ ಎನ್ನೊಳಗೆ ನೀನು ಪ್ರವೇಶ ನಿನ್ನೊಳಗೆ ನಾನು ಪ್ರವೇಶ ಎಂಬುವ ರೀತಿಯಲ್ಲಿ ಲಿಂಗಾಂಗ ಸಾಮರಸ್ಯದ ಅಂತರಂಗದ ಅರಿವು, ಬಹಿರಂಗದ ಲಿಂಗಧ್ಯಾನ, ಅಂತರಂಗ, ಬಹಿರಂಗ ಒಂದಾಗಿ ದೇಹವಿಲ್ಲದಿಪ್ಪಡೆ ಪ್ರಾಣಕ್ಕೆ ಆಶ್ರಯಯುಂಟೆ, ಕನ್ನಡಿ ಇಲ್ಲದಿದ್ದಡೆ ತನ್ನ ಮುಖವು ಕಾಣುವುದು ಸಹಕಾರ ನಿರಾಕಾರ ಎರಡು ಒಂದು ನಾಣ್ಯದ ಎರಡು ಮುಖಗಳಂತೆ ವ್ಯಕ್ತವಾಗುತ್ತದೆ. ಮನುಷ್ಯ ಬಹಿರಂಗದ ಲಾವಣ್ಯ ತಿದ್ದುಕೊಳ್ಳುವುದಕ್ಕೆ ಬಹಿರಂಗದ ದರ್ಪಣವನ್ನು ಬಳಸುತ್ತಾನೆ. ಲಿಂಗಾಂಗ ಯೋಗಿಯಾದವವನ ಅಂತರಂಗಂಡ ಲಾವಣ್ಯವನ್ನು ತಿದ್ದುಕೊಳ್ಳಲು ಇಸ್ಟಲಿಂಗವೆಂಬ ದರ್ಪಣವನ್ನು ಬಳಸಿ ಹೊರಗು ಒಳಗೂ ಶುಚಿರ್ ಭೂತಸಾಗುವನು ಶರಣ, ಐಕ್ಯ, ಈ

ಎರಡು ಸ್ಥಲಗಳು ರಂಜನಮೂರ್ತಿಯಿಂದ ನಿರಂಜನದ ಲಿಂಗದ ಕುರಿತು ಅಲ್ಲಮ ಹೇಳುವಂತೆ ಲಿಂಗವೇ ನೀನಾದ ಬಳಿಕ ಮತ್ತೇಕೆ ಆಲಿಂಗ ಎಂಬ ನಿಲುವಿಗೆ ಬಂದು ಅಂತರ್ ಮುಖ ಧ್ಯಾನದಲ್ಲಿ ತಲ್ಲೀನನಾಗಿ, ಸ್ಥಶಾಲಿ, ಸೂಷ್ಮ, ಕಾರಣ ಶರೀರಗಳು ಪರಸ್ಪರ ಅವಲಂಬಿಗಳು ಆಗಿರುತ್ತದೆ. ಅಷ್ಟಗಳಲ್ಲಿಯ ಎಲ್ಲಾ ತರಹದ ವ್ಯಾಪಾರಗಳು, ಗುಣಗಳು, ಶಕ್ತಿಗಳು, ಲಿಂಗಗಳು, ಆಚಾರಗಳು, ಕ್ರಿಯೆಗಳು, ಸರಿಯಾಗಿ ಉತ್ಕೃಷ್ಣತೆಯನ್ನು ಹೊಂದಬೇಕು, ಅಗ ಷಟಸ್ಥಲದ ಧ್ಯೇಯವು ಇದನ್ನುಂಟು ಮಾಡುವುದೆ ಇದೆ, ಈ ಉದ್ದೇಶದಿಂದಲೇ ಮೂವತ್ತಾರು ಸ್ಥಲಗಳಾಗಿದ್ದು ಅವುಗಳಲ್ಲಿ ಕಟ್ಟಕಡೆಯ ಸ್ಥಲವು ಐಕ್ಯನ ಶರಣ ಇರುತ್ತದೆ.

ಮನುಷ್ಯನ ಈ ೩೬ ಸ್ಥಲಗಳಲ್ಲಿ ಕೆಳಗಿನಿಂದಲೇ ಮೇಲಕ್ಕೆ ಹೋಗಬೇಕೆಂಬ ನಿಯಮವಿಲ್ಲ. ಅವನು ಬೇಕಾದ ಸ್ಥಲದಿಂದ ಆರಂಭ ಮಾಡಬಹುದು. ಉದಾ: ಒಟ್ಟಿನಲ್ಲಿ ಸ್ಥೂಲಸ್ಥಲವೆನಿಕೊಂಡು ಭಕ್ತಸ್ಥಲದ ಗುಣಗಳು ಹೆಚ್ಚಿಗೆ ಪ್ರಕಟವಾಗಿರಬಹುದು ಇಂಥವನು ಸೂಷ್ಮವಾದ ಉಳಿದ ಸ್ಥಲಗಳನ್ನು ತನ್ನಲ್ಲಿ ಪ್ರಕಾಶಪಡಿಸುತ್ತಾ ಹೋಗಬೇಕು. ಆದರೆ ಬೇರೊಬ್ಬನ್ನಲ್ಲಿ ಭಕ್ತನ ಗುಣಗಳಿಗಿಂತಲೂ ಹೆಚ್ಚಿಗೆ ಸೂಷ್ಮಸ್ಥಲವಾದ ಪ್ರಾಣಲಿಂಗಯ ಗುಣಗಳು ಮಿಗಿಲಾಗಿ ಇರಬಹುದು. ಅವನು ಅದರ ಗುಣಗಳನ್ನು ಸ್ಥಿರ ಪಡಿಸಿಕೊಂಡು ಅಂದರೆ ಪ್ರಾಣಲಿಮಗಿಯ ಪ್ರಾಣಲಿಂಗಿಯಾಗಿ ಉಳಿದ ಸ್ಥಲಗಳ ಆಚರಣೆಗಳನ್ನು ಆಚರಿಸುತ್ತಾ ಅವುಗಳ ಗುಣಗಳನ್ನು ಆರಂಭಿಸದೆ, ಪ್ರಾಣಲಿಂಗಿಯ ಪ್ರಾಣಲಿಂಗಸ್ಥಲದಿಂದ ಆರಂಭಿಸುವನು. ಇವನಾದರು ಕೂಡ ಭಕ್ತ ಮೊದಲಾದ ಎಲ್ಲಾ ಸ್ಥಲಗಳೊಳಗಿಂದ ಹಾಯ್ದು ಹೋಗಬೇಕು, ಹೀಗೆ ಅವನು ಕಡೆಗೆ ಐಕ್ಯಸ ಶರಣನಾಗಬೇಕು.

<u>ಚೆನ್ನಬಸವಣ್ಣ ನವರು ಪುಟಸ್ಥಲವನ್ನು ಕುರಿತು ಈ ರೀತಿ ಹೇಳುತ್ತಾರೆ.</u>

ಪೃಥ್ವಿ ಭಕ್ತಸ್ಥೂಲ , ಮುಖನಾಸಿಕ ಅದಕ್ಕೆ ಆಚಾರಲಿಂಗ.

ಅಪ್ಪು ಮಾಹೇಶ್ವರ ಸ್ಥಲ, ಮುಖಜಿಹ್ವೆ, ಅದಕ್ಕೆ ಗುರುಲಿಂಗ.

ತೇಜ ಪ್ರಸಾದಿ ಸ್ಥಲ, ಮುಖನೇತ್ರ, ಅದಕ್ಕೆ ಶಿವಲಿಂಗ.

ವಾಯು ಪ್ರಾಣಲಿಂಗ ಸ್ಥಲ, ಮುಖಸ್ಪರ್ಶನ ಅದಕ್ಕೆ ಜಂಗಮಲಿಂಗ.

ಆಕಾಶ ಶರಣಸ್ಥಲ, ಮುಖಶ್ರೋತ್ರ, ಅದಕ್ಕೆ ಪ್ರಸಾದಲಿಂಗ.

ಅತೀತ ಐಕ್ಯಸ್ಥಲ, ಮುಖತೃಪ್ತಿ, ಅದಕ್ಕೆ ಮಹಾಲಿಂಗ.

ಇಂತೀ ಷಡುಸ್ಥಲಂಗಳುತ್ಪತ್ಯ ಕೂಡಲ ಚೆನ್ನ ಸಂಗಮದೇವಾ.

ಮತಿಜ್ಞಾನ, ಶೃತಿಜ್ಞಾನ, ಖಂಡಜ್ಞಾನ, ಕೇವಲಜ್ಞಾನ, ಜ್ಯೋತಿರ್ಜ್ಞಾನ, ಮಹಾಜ್ಯೋತಿರ್ಜ್ಞಾನವೆಂದಿತು, ಜ್ಞಾನವಾರು ತೆರನು.

ಮತಿಜ್ಞಾನದಿಂದ ಶೃತಿಜ್ಞಾನಪಹದು..

ಶೃತಿಜ್ಞಾನದಿಂದ ಖಂಡ ಜ್ಞಾನಪಹದು.

ಖಂಡಜ್ಞಾನದಿಂದ ಕೇವಲ ಜ್ಞಾನಪಹದು.

ಕೇವಸ್ಲ ಜ್ಞಾನದಿಂದ ಜ್ಯೋತಿರ್ಜ್ಞಾನವಹದು.
ಜ್ಯೋತಿರ್ಜ್ಞಾನದಿಂದ ಮಹಾಜ್ಯೋತಿರ್ಜ್ಞಾನವಹುದು.
ಮತಿಜ್ಞಾನವೇ ಭಕ್ತ, ಶೃತಿಜ್ಞಾನವೇ ಮಹೇಶ್ವರ.
ಖಂಡಜ್ಞಾನವೇ ಶರಣ, ಮಹಾಜ್ಯೋತಿರ್ಜ್ಞಾನವೇ ಐಕ್ಯ.
ಈ ಷಟಸ್ಥಲದ ನೆಲೆಯ ಬಲ್ಲಾತನೆ ಕೂಡ್ಲ ಚೆನ್ನ ಸಂಗಯ್ಯನಲ್ಲ ಐಕ್ಯನು.

ಚೆನ್ನಬಸವಣ್ಣನವರು ಕಾರಣ ಅಸಿಗೆಯ ಸಂಬಂಧಿಸಿದಕುವು ವಚನಗಳಲ್ಲಿ ಷಟುಸ್ಥಲಗಲನ್ನು ಕುರಿತು ಸೂಷ್ಮವಾಗಿ ಮೂರನೆಯ ಸಂಪುತ ೧೩೫೫ ನೆಯ ವಚನ ಮತ್ತು ೧೪೪೫ ವಚನ ಈ ಎರಡು ವಚನಗಳಲ್ಲಿ ಈ ಷಟಸ್ಥಲದ ಬಹುಮುಖಗಳನ್ನು ಅಭಿವ್ಯಕ್ತಗೊಳಿಸಿದ್ದಾರೆ. ಭಕ್ತಸ್ಥಲವು ಪೃಥ್ವಿಯಾಗಿ ನಾಸಿಕದಲ್ಲಿ ಆಚಾರಲಿಂಗವಾಗಿ ಹೊರಹೊಮ್ಮ್ ಪೃಥ್ವಿಯ ಅಂದರೆ ಭೂಮಿಯ ಅಖಂಡತ್ವವನ್ನ ಈ ಭಕ್ತಸ್ಥಲದಲ್ಲಿ ತೋರಿಸುತ್ತಾರೆ. ಅಪ್ಪು, ಮಹೇಶ್ವರ ಸ್ಥಲದ ರುಚಿಯ ವಿವಿಧ ಆಯಾಮಗಳನ್ನು ಜಿಹ್ವೆದ ಗುರುಲಿಂಗದಿಂದ ಅರಿತು ಸ್ಥೂಲ, ಸೂಷ್ಮ ಕಾರಣ ತ್ರಿಶರೀರಗಳಿಗೆ ರುಚಿಯನ ಕೊಡುವ ಗುರು ವಾಕ್ಯ ಮಹೇಶ್ವರ ಸ್ಥೂಲವಾಗಿರುತ್ತದೆ. ಪ್ರಸಾದಿ ಸ್ಥಿಲದ ತೇಜಸ್ಸು, ನೇತ್ರದಲ್ಲಿ ಪಲ್ಲವಿಸಿ ಶಿವಲಿಂಗಪ್ಪ ಆಕಾರವಾಗಿ ಗೂಡಿನಲ್ಲಿರುವ ಪಕ್ಷಿಯು ಜಗವೆಲ್ಲ ನೋಡುವ ಹಾಗೆ ತನ್ನೊಳಗೆ ಅವಗಿಟ್ಟು ಕೊಂಡಿರುವ ಆ ಮಹಾಬೆಳಕು ತೇಜೋಮಯಪಾಪ ಪ್ರಸಾದಿ ಸ್ಥಲದಲ್ಲಿ ಬೆಂಕಿಯಲ್ಲಿರುವ ಗುಣ, ಬಿಸಿನೀರಿನಲ್ಲಿಂಟ ಎಂಬಂತೆ ತಪೋಮಯವಾದ ನೇತ್ರವು ತನ್ನೊಳಗೆ ಅಡಗಿಟ್ಟಕೊಂಡಿದೆ. ಪ್ರಸಾದಿ ಲಿಂಗಸ್ಥಲ, ವಾಯುವಿನ ಮೂಲಕ ಸ್ಪರ್ಶಗೊಂಡು ಚರಜಂಗಮಲಿಂಗವಾಗಿ, ನವಪ್ವಾರಗಳಲ್ಲಿ ತೊಳಗಿ ಬೆಳಗುವುದು ಕಂಪು ತ್ರಿಶರೀರಗಳು ಮೌನಗೊಂಡು ವಾಯುವು, ತನ್ನೊಳಗಾತಿರ್ಪ ಬೇಧಗಳ ಏಣಿಸಲು ಸಾಧ್ಯವಿಲ್ಲ ಹಾಗೆ ಗಂಧವೊ, ಸುಗಂದವೋ ಅಥವಾ ದುರ್ಗಂದವೋ ಯಾವುದೇ ಬೇದವಿಲ್ಲದೆ, ಮೇಲು ಕೀಲು ಎಂಬ ಅಂತರವಿಲ್ಲದೆ, ಸರ್ವರಿಗೂ ಸಮಪಾಲು, ಸರ್ವರಿಗೂ ಸಮಬಾಳು ಎಂಬುದ ರೀತಿಯಲ್ಲಿ ವಾಯುವು ಪಲ್ಲವಿಸಿ ಸರ್ವರನ್ನ ಸ್ಪರ್ಶಿಸಿ ಪ್ರಾಣಲಿಂಗಸ್ಥಳವಾಗಿ ಜಂಗಮ ಮಹಾಲಿಂಗದಲ್ಲಿ ಪಲ್ಲವಿಸಮನೋಡಾ

ಶರಣಸ್ಥಲ ಆಕಾಶತತ್ವವಾಗಿ ಶ್ರೋತದಲ್ಲಿ ನುಡಿಗೊಂಡು ಪ್ರಸಾವಲಿಂಗವಾಗಿಪ್ಪದು ಆ ಪ್ರಸಾದದಲ್ಲಿ ಬಯಲು ಬಯಲಾಗಿ ಬಯಲಾಗಿತ್ತಯ್ಯ ನಿಮ್ಮವಪೂಜಿಸಿದರು ಮುನ್ನವೇ ಬಯಲಾದಿಯು ನಾ ನಿನ್ನ ನಂಬಿ ಬಯಲಾದೆ, ಬಯಲ ಭಾವನೆ ಬಯಲು ಜೀವನ ಬಯಲೊಳಗೆ ಬಯಲಾಗಿ ಬಯಲಾಗುವುದ ಕಂಡು ಶರಣ ಸ್ಥಲವು ವಿಕಾಸಗೊಂಡಿತ್ತು. ಆ ವಿಕಾಸವೆಲ್ಲವು ಕರುಣ ಎಂಬ ಕುಂಪಲಿಯ ಸ್ತೋತ್ರವಾಗಿ ಸರ್ವಾಂಗಗಳೀಗೆ ಪ್ರಸಾದವ ಬಡಿಸುವ ಮಹಾ ಸ್ಥಲವಾಗಿತ್ತು.

ಐಕ್ಯ ಸ್ಥಲವು ತ್ರೂಕಾತೀತ ನೆಲಗಪ್ಪನ ಅತೀವವಾದ ತೃಪ್ತಿ ಮುಖದಿಂದ ಮಹಾಲಿಂಗವಾಇ ಇದ್ದು ಇಲ್ಲದ ಸ್ಥಿತಿಯಲ್ಲಿ ಶ್ರೋತ್ರ ನೇತ್ರ, ಪ್ರಾಣ , ತೊಕ್ಕು , ಜಿದ್ದೆ, ವಾಕ್ಕು, ಪಾಣಿ ಪಾಪ, ಪಾಯು, ಗುಹ್ಯೆಗಲೆಂಬ ದಶೇಂಧೀಯಗಳನ್ನೊಳಗೊಂಡು ಐಕ್ಯನಾಗುವ ಮಹಾ ವ್ಯವಸ್ಥೆಯನ್ನು ನಮ್ಮ ಲಿಂಗಾಯಿತ ಪರಂಪರೆಯ ಶ್ರೇಷ್ಟತ್ವವನ್ನು

ಈ ಘಟಸ್ಥಲದ ತತ್ವದಲ್ಲಿ ಜಾತಿ, ಮತ, ಪರಿವಾಗಳ ಭೇದವಿಲ್ಲದೆ ಸರ್ವರು ಲಿಂಗಾಂಗಿಗಾಗಿದ್ದರೆ , ಅನುಭವಿಸುವ ಅಥವಾ ಕೂಡಿರುವ ಸಂಗಮ ಇವಾಗಿರುತ್ತದೆ. ಎಂಬ ತತ್ವವನ್ನು ಚೆನ್ನ ಬಸಣ್ಣ ನವರ ಕಾರಣ ಅಸಿಗೆಯಿಂದ ತಿಳಿದು ಬರುತ್ತದೆ. ಮತ್ತೊಂದು ವಚನದಲ್ಲಿ ಕರಣ ಹಸಿಗೆಯ ವಸ್ತು ವಿಷಯವನ್ನು ಕುರಿತು, ಘಟಸ್ಥಲಗಳನ್ನು ಕುರಿತು, ಮತಿಜ್ಞಾನ, ಶೃತಿ ಜ್ಞಾನ, ಖಂಡಜ್ಞಾನ ಕೇವಲಜ್ಞಾನ, ಜ್ಯೋತಿಜ್ಞಾನ, ಮಹಾಜ್ಯೋತಿರ್ಜ್ಞಾನವ ಭಕ್ತ, ಮಹೇಶ ಪ್ರಸಾವಿ ಪ್ರಾಣಲಿಂಗ, ಶರಣ, ಐಕ್ಯವನ್ನು ಘಟಸ್ಥಲಗಳಿಗೆ ಹೋಲಿಸಿ ಘಟಸ್ಥಲದ ಜ್ಞಾನ ಬಲ್ಲವನೇ ಐಕ್ಯನು ನೋಡಾ ಎಂಬ ನೆಲೆಗಟ್ಟನ್ನು ತನ್ನ ಜ್ಯೋತಿರ್ಜ್ಞಾಸ ಎಂದ ಅಭಿವೃದ್ಧಿಗೊಳಿಸಿದ್ದಎ. ಇಂತಹ ಮಹಾ ಪ್ರಕರಣ ಹಸಿಗೆ ಮತ್ತು ಗರ್ಭ ಉಪನಿಷತ್ತುವಿನಲ್ಲಿ ಕಾಣಬಹುದಾಗಿದೆ.

ಕರಣ ಹಸಿಗೆಯ ವಸ್ತು ವಿಷಯವು ತನ್ನ ಸರ್ವಾಂಗ ಪರಿದಿಯನ್ನು ಈ ಮೂಲಕ ಹೊರತರಲಾಗುವುದು, ತಾರಾಕೃತಿ, ದಂಪಾಕೃತಿ, ಕುಂಡಾಲಾಕೃತಿ, ಅರ್ಧಚಂದ್ರಕೃತಿ ದರ್ಪಣಾಕೃತಿ, ಜ್ಯೋತಿರ್ಮಯಾ ಕೃತಿ, ನಿಷ್ಕಾಳಾಕೃತಿ, ನಿರಾಳಾಕ್ರುತಿ, ನಿರಂಜನಾಕೃತಿ, ಇವು ಆಕೃತಿಗಳು ನೋಡಾ ಈ ಆಕೃತಿಗಳ ಮಧ್ಯದಲ್ಲಿ ಪ್ರಾಣವಗಳೆಂತೆಂಡತೆ ನಕಾರ, ಮಕಾರ, ಶಿರರ, ವಕಾರ, ಯಕಾರ, ಓಂಕಾರ, ಷಕಾರ್ ಅಕಾರ, ಇವು ಪ್ರಣವಂಗಳು ನೋಡಾ ಈ ಪ್ರಾಣವಂಗಳ ಸಾದಗಳಂತೆಂಪಡೆ, ಪೆಸಂಬಿಸಾದ, ವೇಣುಸಾದ, ಘಂಟಸಾಧ, ಜೀರಿನಾದ, ಮೇಘನಾದಸ್, ಪ್ರಣವನಾದ, ಕಿಂಕಿಣೆನಾದ, ಅಂಗಣಿತನಾದ, ದಿವ್ಯಸಾದ, ಈ ಸಾವಗಳಿಗೆ ಪಿಂಡವೆಂತೆಂಡತೆ, ಭಕ್ತಿನೆಂಬ ಪಿಂಡ, ಮಹೇಶ್ವರನೆಂಬ ಪಿಂಡ ಪ್ರಸಾದಿವೆಂಬ ಪಿಂಡ, ಪ್ರಾಣಲಿಂಗಿ ಎಂಬ ಪಿಂಡ, ಶರಣನೆಂಬಪಿಂಡ, ಐಕ್ಯನೆಂಬ ಪಿಂಡ, ಚಿದ್ಗುಣನೆಂಬಪಿಂಡ, ಚಿನ್ಮಯನೆಂಬ ಪಿಂಡ, ಚಿಸೂರ್ತಿನೆಂಬ ಪಿಂಡ, ಈ ಪಿಂಡಗಳಿಗೆ ಘಡ್‌ಘಾರಂಗಳಾವುವು ಎಂದಡೆ ಆಘಾರಚರ್ಕ, ಸ್ವಾಧೀಷ್ಟನಚರಣ, ಮಣಿಪೂರರ ಚಕ್ರ, ಅನಾಹತ ಚಕ್ರ, ವಿಶುದ್ಧಿಚಕ್ರ, ಅಜ್ಞಾಚಕ್ರ, ಬ್ರಹ್ಮಚಕ್ರ, ಬ್ರಹ್ಮಚಕ್ರ, ಶಿಖಾಚಕ್ರ, ಪಶ್ಚಿಮ ಚಕ್ರ, ಈ ಚಕ್ರಗಳಿಗೆ ವರ್ಣಂಗಳಾವಾದೆಂದಡೆ, ಪೀತವರ್ಣ, ಶ್ವೇತವರ್ಣ, ಪುಷ್ಯರಾಗದ ವರ್ಣ, ಮುತ್ತನ ವರ್ನ, ವೈಡೂರ್ಯದ ವರ್ಣ ಎಳೆಯ ಮಾಣಿಕ್ಯದ ವರ್ಣ, ಗೋಮೇಧಿಕ ವರ್ನ, ಪಶ್ಯವರ್ಣ, ವಜ್ರದವರ್ನ ಈ ವರ್ಣಗಳಿಂಗೆ ಅಂಗಗಳಾವೆಂದಡೆ, ಪೃಥ್ವಿಯಂಗ, ಅಪ್ಪುವಂಗ, ಅಗ್ನಿಯಂಗ, ವಾಯುವಂಗ, ಆಕಾಶವಂಗ, ಆತ್ಮಂಗ, ಯೋಗಾಂಗ, ಭೋಗಾಂಗ ತ್ಯಾಗಂಗ ಈ ಅಂಗಗಳಿಗೆ ಆತ್ಮಂಗಳಾಪಾವೆಂಡತೆ ಜೀಪಾತ, ಅಂತರಾತ್ನ, ಪರಮಾತ್ಮ, ಜ್ಞಾನಾತ್ಮ, ನಿರ್ಮತಾತ್ಮ, ಶುದ್ಧಾತ್ಮ, ಮಹಾರ್ತ ಚಿಪಾರ್ತ, ವಿದ್ಯಾರ್ತ ಈ ಆತ್ಮಗಳಿಬ್ಗೆ ಮೂರ್ತಿಗಳಾಕಾರೊಂದಡೆ, ಭಕ್ತ ಮಹೇಶ್ವರ ಪ್ರಸಾದಿ, -ಪ್ರಾಣಲಿಂಗಿ, ಶರಣ, ಐಕ್ಯ ನಿಃಕಳ, ನಿರಾಳ, ನಿರಂಜನ ಈ ಮೂರ್ತಿಗಳಿಗೆ ತಸುಗಳಾವಾವೆಂಡತೆ, ಸ್ಥೂಲತನು , ಸೂಕ್ಷ್ಮ , ತನು, ಕಾರಣವನ್ನು, ನಿರ್ಮಳವನು, ಆನಂದತನು, ಶುದ್ಧತನು, ಚಿದ್ರೂಪತನು, ಚಿನ್ನಯತನು, ನಿರ್ಮುಕ್ತತನು ಈ ತಿಸುಗಳಿಗೆ ಹಸ್ತಂಗಳಾವಾವೆಂದರೆ ಸುಚಿತ್ತ, ಸುಬುದ್ಧಿ, ನಿರಹಂಕಾರ, ಸುಮನ, ಸುಜ್ಞಾನ,ಸದ್ಭಾಪ, ನಿರ್ಭಾಪ ನಿರ್ಣಯ, ನಿರಾಳ, ಈ ಹಸ್ತಂಗಳಿಗೆ ಲಿಂಗಗಳಾವೆಂದದೆ, ಅಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಾಸಾದಲಿಂಗ, ಮಹಾಲಿಂಗ,

ಇಷ್ಟಲಿಂಗ, ಪ್ರಾಣಲಿಂಗ ಭಾವಲಿಂಗ, ಅಯಮಲ್ಲದೆ, ನಿಃಕಲಲಿಂಗ, ನಿಶೂನ್ಯಲಿಂಗ, ನಿರಂಜನಲಿಂಗ, ಈ ಲಿಂಗಗಳಿಗೆ ಮುಖಂಗಳಾವಾವೆಂದಡೆ, ಪ್ರಾಣ, ಜಿಹ್ವೆ, ನೇತ್ರ, ತ್ವಕ್ಕು, ಶ್ರೋತ್ರ ಹೃದಯ ಪರಬ್ರಹ್ಮ ಅಬಾಶಿಖಿ, ಉರ್ನವಿ, ಈ ಮುಖಂಗಳಿಗೆ ಶಕ್ತಿಗಳಾವೆಂಡದೆ ಕ್ರಿಯಾಶಕ್ತಿ ಜ್ಞಾನಶಕ್ತಿ, ಇಚ್ಛಾಶಕ್ತಿ, ಅದಿಶಕ್ತಿ, ಪಾಶಕ್ತಿ, ಚಿಛ್ಛಕ್ತಿ, ಪರಿಪೂರ್ಣಶಕ್ತಿ, ನಿಬ್ರಾಂತಿಶಕ್ತಿ, ನಿರ್ಭಿನ್ನ ಶಕ್ತಿ, ಈ ಶಕ್ತಿಗಳಿಗೆ ಭಕ್ತಿಗಳಾಪಾವೆಂದಡೆ, ಶ್ರದ್ಧಾಶಕ್ತಿ, ನೈಷ್ಠಿಕಾಭಕ್ತಿ, ಸಾವದಾನಭಕ್ತಿ, ಅನುಭಾವಭಕ್ತಿ, ಆನಂದ ಭಕ್ತಿ, ಸಮರ ಭಕ್ತಿ, ಪರಿಪೂರ್ಣಭಕ್ತಿ, ಅಪುದರ್ಶ ಭಕ್ತಿ, ನಿರ್ನಾಮ ಭಕ್ತಿ, ಅಯಮಲ್ಲದೆ, ಅಖಂಡಭಕ್ತಿ, ನಿರಾಜನಭಕ್ತಿ, ಈ ಭಕ್ತಿಗಳಿಗೆ ಪದಾರ್ಥಂಗಳಾಪಾವಾಡದೆ, ಗಂಧ ಪದಾರ್ಥ, ರಸಪದಾರ್ಥ, ರೂಪ್ರಪದಾರ್ಥ, ಪರಮಾನಂದವೆಂಬ ರುಚಿ ಪದಾರ್ಥ, ಸ್ಪರ್ಶನಪದಾರ್ಥ, ಶಬ್ಧಪದಾರ್ಥ, ತೃಪ್ತಿ ಪದಾರ್ಥ ಆನಂದವೆಂಬ ರೂಪುಪದಾರ್ಥ, ಪರಮಾನಂದವೆಂಬ ರುಚಿಪದಾರ್ಥ ಪರಮಾಮೃತವೆಂಬ ತೃಪ್ತಿ ಪದಾರ್ಥ, ಈ ಪದಾರ್ಥಂಗಗಳು ಲಿಂಗಾರ್ವತಪಾದ ಪ್ರಸಾದಗಳಾವಾವೆಂಡತೆ ಸುಗಂಧ ಪ್ರಸಾದ ಸುರಸಪ್ರಸಾದ , ಸೂರುಪಪ್ರಸಾದ, ಸುಸ್ಪರ್ಶನ ಪ್ರಸಾದ, ಸುರಬ್ಬಿ ಪ್ರಸಾದ, ಸುತೃಪ್ತಿ ಪ್ರಸಾದ , ಸುಅವರಿಳಾ ಶುದ್ಧ ಪ್ರಸಾದ ಸುಪಂಮಾನಂದ ಸಿದ್ದ ಪ್ರಸಾದ, ಸುಪರಮಾಮೃತ ಪ್ರಸಿದ್ದ ಪ್ರಸಾದ, ಈ ಪ್ರಸಾದಂಗಳ ಲಿಂಗಾರ್ಪಿತಪ ಮಾಡುವ ಪೂಜಾರಿಗಳಾಕಾರೆಂದೊಡೆ, ಬ್ರಹ್ಮಪೂಜಾರಿ, ವಿಷ್ಣು ಪುಜಾರಿ, ರುದ್ರಪೂಜಾರಿ, ಈಶ್ವರ ಪೂಜಾತಿ, ಸದಾಶಿವಪೂಜಾರಿ, ಪರಶಿವ ಪೂಜಾತಿ, ಅಗಣೆತನೆಂಬ ಪೂಜಾರಿ, ಅಪ್ರಮಾನವೆಂಬ ಪೂಜಾರಿ, ಚಾಲೇಶ್ವರನೆಂಬ ಪೂಜಾರಿ ಈ ಪೂಜಾರಿಗಳಿಗೆ ಅಧಿಪೈ ಮಂಗಲಾಕಾರೆಂದಟೆ, ಭವನದಿದೈಪ, ದೃಢನಧಿದೈವ, ಭೀಮನಧಿದೈಪ, ಮಹಾನಧಿದೈವ, ಮಹಾಶ್ರೀ ಗುರುವಧಿದೈವ, ಪಮ್ಮೋದ್ಭವನಧಿದೈವ, ಚಿವಿಂದುವಧಿದೈವ, ಚಿತ್ಸೋರ್ಯವಧಿ ದೈವ, ಈ ಅಧಿದೈವಂಗಳಿಗೆ ಬ್ರಹ್ಮ ಮೂರ್ತಿಗಳಾಕಾರೆಂದೊಡೆ, ಮೂರ್ತಿ ಬ್ರಹ್ಮ, ಪಿಂಡಬ್ರಹ್ಮ, ಕಲಾಬ್ರಹ್ಮ, ಆನಂದಬ್ರಹ್ಮ , ವಿಜ್ಞಾನ ಬ್ರಹ್ಮ ಪರಬ್ರಹ್ಮ, ಪರಿಪೂರ್ಣಬ್ರಹ್ಮ, ಅಖಂಡಬ್ರಹ್ಮ, ಅವಿರಳಬ್ರಹ್ಮ, ಈ ಬ್ರಹ್ಮಗಳಿಗೆ ಕಲೆಗಳಾವಾವೆಂದಡೆ, ನಿವೃತ್ತಿಕಲೆ, ಪ್ರತಿಷ್ಟಕಲೆ, ವಿದ್ಯಾಕಲೆ, ಶಾಂತಿಕತೆ, ಶಾಂತ್ಯತೀತಕಲೆ, ಶಾಂತ್ಯತೀತೋತ್ತರಕಲೆ, ಅಸಾದಿಯೆಂಬಕಲೆ, ನಿರುಪಮಕಲೆ, ನಿರ್ವಾಚ್ಯಕಲೆ, ಈ ಕಲೆಗಳಿಗೆ ಸಾದಾಖ್ಯಂಗಳಾವಾವೆಂದಡೆ, ಕರ್ಮಸಾಪಾಖ್ಯ, ಶತೃಸಾಪಾಖ್ಯ, ಮೂರ್ತಿಸಾಪಾಖ್ಯ, ಅಮೂರ್ತಿಸಾದಾಖ್ಯ, ಶಿವಸಾಪಾಖ್ಯ, ಮಹಾಸಾದಾಖ್ಯ, ನಿರ್ಮಾಯಸಾದಾಖ್ಯ, ಅವಿರಳಸಾಪಾಖ್ಯ, ನಿರ್ಮುಕ್ತ ಸಾದಾಖ್ಯ, ಈ ಸಾಮಾಖ್ಯಂಗಳಿಗೆ ಲಕ್ಷಣಂಗಳಾಪಾಂದೆಡೆ, ಸತ್ತುವೆಂಬ ಲಕ್ಷ್ಮಣ, ಬಿತ್ತುವೆಂಬ ಲಕ್ಷ್ಮಣ, ಆನಂದವೆಂಬ ಲಕ್ಷ್ಮಣ, ನಿತ್ಯವೆಂಬ ಲಕ್ಷ್ಮಣ, ಪರಿಪೂರ್ನವೆಂಬ ಲಕ್ಷ್ಮಣ, ಅಖಂಡನೆಂಬ ಲಕ್ಷ್ಮಣ, ಅಸಾಯುಯನೆಂಬಲ ಲಕ್ಷ್ಮನ, ಅಗಮ್ಯವೆಂಬ ಲಕ್ಷ್ಮಣ, ಅಪ್ರಮಾಣವೆಂಬ ಲಕ್ಷ್ಮಣ, ಈ ಲಕ್ಷ್ಮಣಂಗಳಿಗೆ ಸಂಜ್ಞೆಗ್ಗಳಾಪಾವೆಂದಡೆ. ಪರವೆಂಬ ಸಂಜ್ಞೆ ಗೂಢವೆಂಬ ಸಜ್ಞೆ ಶರೀರಸ್ಥವೆಂಬ ಸಂಜ್ಞೆ ಲಿಂಗಕ್ಷೇತ್ರವೆಂಬ ಸಂಜ್ಞೆ ಅನಾದಿವತ್ ಎಂಬ ಸಂಜ್ಞೆ ಮಹಾಸಂಜ್ಞೆ ನಿರ್ನಾಮವೆಂಬ ಸಂಜ್ಞೆ, ಅಪ್ರಮಾಣವೆಂಬ ಸಂಜ್ಞೆ, ಅವಿರಳ ಸಂಜ್ಞೆ ಈ ಸಂಜ್ಞೆಗಳಿಗೆ ದಿಕ್ಕುಗಳಾವಾವೆಂದಡೆ, ಪಶ್ಚಿಮ ದಿಕ್ಕು, ಉತ್ತರ ದಿಕ್ಕು, ದಕ್ಷಿಣದಿಕ್ಕು, ಪೂರ್ವದಿಕ್ಕು, ಉರ್ಧ್ವದಿಕ್ಕು, ಗಂಬೀರದಿಕ್ಕು, ಧನದಿಕ್ಕು, ಸುದ್ವವಯನೆಂಬ ದಿಕ್ಕು, ಜ್ಞಾನಶೂನ್ಯ ಮಹಾಜ್ಯೋತಿ ದಿವ್ಯಪಾದ

ಟೋಪದಿಕ್ಕು, ಈ ದಿಕ್ಕುಗಳಿಗೆ ವಕ್ತ್ರಂಗಳಾಪಾವೆಂದಂತೆ, ಸದ್ಯೋಗಜಾತ ವಕ್ತ್ರ, ವಾಮದೇವ ವಕ್ತ್ರ, ತತ್ಪುರುಷ ವಕ್ತ್ರ, ಈಶಾನ ವಕ್ತ್ರ, ಗೋಪ್ಯ ವಕ್ತ್ರ, ತಾರಕಬ್ರಹ್ಮವೆಂಬ ವಕ್ತ್ರ, ಸುರಾಳವೆಂಬ ವಕ್ತ್ರ, ನಿರಂಜನವೆಂಬ ವಕ್ತ್ರ, ಈ ವಕ್ತ್ರಂಗಳಲ್ಲಿ ಪುಟ್ಟಿದ ದೇವಂಗಳಾವಾವೆಂದಡೆ, ಋಗ್ವೇದ, ಯಜುರ್ವೇದ, ಸಾಮದೇವ,ಅಥರ್ವಣವೇದ, ಅಜಪವೇದ, ಗಾಯಿತ್ರಿವೇದ, ಗಾಂಧರ್ವವೇದ, ಧನುರ್ವೇದ, ಈ ವೇಪಂಗಳಿಗೆ ಅಧ್ವಂಗಳಾಪಾವೆಂದಡೆ, ಭುವಸಾಧ್ವ, ಪದಾಧ್ವ, ವರ್ಣಾಪ್ವ, ಕಲಾಪ್ವ, ತತ್ವಾಧ್ವ, ಮಂತ್ರಾಧ್ವ, ಲಿಂಗಾಧ್ವ, ಪ್ರಸಾದಾಧ್ವ, ಸರ್ಪಶೂನ್ಯಾಧ್ವ, ಈ ಸಕೀಲಗಳಲ್ಲಿ ಇಪ್ಪ ಬ್ರಹ್ಮದ ವೃತ್ತ, ಕಟಪರ್ತಳ, ಗೋಮುಖ, ನಾಳ, ಗೋಳಕ, ಅಜ್ಯಪ್ರದಾರಿಕೆ, ಅಭ್ರಶಿಖಿ ಚಿದಬ್ಜವೆಂಬ ನವಸ್ಥಾನಂಗಳಲ್ಲಿ ಸಂಬಂಧವಾಗಿಹಪು, ಅದೆಂತೆಂದು ಸದ್ಭಕ್ತ ಶರಣಜನಂಗಳು ಬೆಸಗೊಂಡಲ್ಲಿ, ಮುಂದೆ ತ್ರಿವಿಧ ಲಿಂಗಾನುಭಾವಿಗಳಾದ ಷಟ್‌ಸ್ಥಲಬರರ್ಹಿಗಳು ಸೂತ್ರವಿಟ್ಟು ನಿರೂಪಿಸುತ್ತಿಹರು, ಇಂತು ಹೆಂದೆ ಹೇಳಿದ ಸಕೀಲುಗಳನ್ನು ಹಸ್ತಾಬ್ಜ ಪೀಠದಲ್ಲಿ ಮೂರ್ತಿಗೊಂಡಿಪ್ಪ ಪಂಚಾಸೂತ್ರಯುಕ್ತಪಾಪ ವಿಷ್ಣು ಬ್ರಹ್ಮದಲ್ಲಿ ಸಂಬಂಧ ಮಾಡುವ ಬೇದದ ಸದ್ಭಕ್ತ ಶರಣಜನಂಗಳ ಬೆಸಗೊಂಡಲ್ಲಿ ,ಮುಂದೆ ತ್ರಿವಿಧ ಲಿಂಗಾನುಭಾವಿಗಳಾದ ಷಟ್‌ಸ್ಥಲ ಸಂಪ್ನರಾಜ ವೀರಶೈಪಾರ್ಚಾರ್ಯರು ಉಪದೇಶದ ಮಾಡುತ್ತಿಹರು. ಅದೆಂತೆಂಡೊದೆ ಆ ವಿಷ್ಣು ಬ್ರಹ್ಮದಧೋಕಂಜದಲ್ಲಿ ತಾರಕಾ ಕೃತಿ, ನಕಾರಪ್ರಣವ, ಪೆಣ್ಣುಂಬಿನಾದ ಭಕ್ತನೆಂಬಪಿಂಡ, ಅಘಾರಚಕ್ರ, ಪೀತವರ್ನ, ಭಕ್ತನೆಂಬ ಮೂರ್ತಿ, ಪೃಥ್ವಿಯಂಗ, ಜೀಪಾತ್ಮಭಕ್ತ, ಸ್ಥಲತನು, ಸುಚಿತ್ತ ಹಸ್ತ, ಆಚಾರಲಿಂಗ, ಘ್ರಾಣವೆಂಬ ಮುಖ, ಕ್ರಿಯಾಶಕ್ತಿ, ಶ್ರದ್ಧಾಶಕ್ತಿ, ಗಂಧಪದಾರ್ಥ, ಸುಗಂದಪ್ರಸಾದ, ಬ್ರಹ್ಮ, ಪೂಜಾರಿ, ಭವಸಧಿದೈವ, ನಿವೃತ್ತಿ ಕಲೆ, ಕರ್ಮಸಾಪಾಖ್ಯ, ಸತ್ತುವೆಂಬ ಲಕ್ಷಣ, ಪರವೆಂಬ ಸಂಜ್ಞೆ, ಸವ್ಯೋಜಾತ ವಕ್ತ್ರ, ಋಗ್ವೇದ, ಇಂತಿವೆಲ್ಲವು ಇಸ್ಸಲಿಂಗಪ ವೃತ್ತದಲ್ಲಿ ಸಂಬಂಧಿವು ದಂಡಾಕೃತಿ, ಮಕಾರಪ್ರಾಣಪ, ವೇಣುಸಾದ, ಮಾಹೇಶ್ವರನೆಂಬ ಪಿಂಡ, ಸ್ವಾಧೀಷ್ಠಾನಚಕ್ರ, ಶ್ವೇತವರ್ಣ, ಮಹೇಶ್ವರನೆಂಬ ಮೂರ್ತಿ, ಅಪ್ಪಪಂಗ, ಅಂತಕಾರ್ತ, ಸೂಕ್ಷತನು, ಸುಬುದ್ಧಿ ಹಸ್ತ, ಗುರುಲಿಂಗ ,ಜಿಹ್ವೆಯೆಂಬ, ಮುಖ ಜ್ಞಾನಶಕ್ತಿ, ನೈಷ್ಠಿಕಾಭಕ್ತಿ, ರಸಪದಾರ್ಥ, ಸುರಸಪ್ರಸಾವ, ವಿಷ್ಣುಪೂಜಾರಿ, ಮೃಡನಧಿದೈವ, ಪ್ರತಿಷ್ಠೆಯೆಂಬ ಕಲೆ, ಕರ್ತೃಸಾಪಾಖ್ಯ, ಚಿತ್ತುವೆಂಬ ಲಕ್ಷಣಮ್, ಗೂಢವೆಂಬ ಸಂಜ್ಞೆ ವಾಮದೇವ ವಕ್ತ್ರ ಯಜರ್ವೇದ ಇಂತಿವೆಲ್ಲವು ಇಸ್ತಿಲಿಂಗದ ಕಟಿಯಲ್ಲಿ ಸಂಬಂಧವು ಕುಂಪಾಲಾಕೃತಿ, ಶಿಕಾರಪ್ರಾಣಪ,ಘಂಘಸಾವ, ಪ್ರಸಾವವೆಂಬ ಪಿಂಡ, ಮಣಿಪೂರಕ ಚಕ್ರ ಪುಷ್ಪರಾಗವರ್ಣ,ಪ್ರಸಾದಿಯೆಂಬ ಮೂರ್ತಿ ಆಗ್ನಿಯೆಂಬ ಅಂಗ, ಪರಮಾತ್ಮ ಪ್ರಸಾವಿ ಕಾರಣವನು, ನಿರಾಹಂಕಾರಹಸ್ತ, ಶಿವಲಿಂಗ, ನೇತ್ರವೆಂಬ, ಮುಖ ಇಚ್ಛಾಶಕ್ತಿ, ಸಾಪಧಾನಭಕ್ತಿ, ರೂಪುಪದಾರ್ಥ, ಸ್ವರೂಪ ಪ್ರಸಾದ, ರುದ್ರಪೂಜಾರಿ, ಹರಿನಧಿದೈವ, ವಿದ್ಯಾಕಲೆ, ಮೂರ್ತಿ ಸಾಪಾಖ್ಯ, ಆನಂದವೆಂಬ ಲಕ್ಷಣ, ಶರೀರಸ್ಥವೆಂಬ ಸಂಜ್ಞೆ, ಅಘೋರವಕ್ತ್ರ, ಸಾಮದೇವ, ಇಂತಿವೆಲ್ಲವು ಇಸ್ಸಲಿಂಗದ ವರ್ಗಳದಲ್ಲಿ ಸಂಬಂಧವು ಅರ್ಧಚಂದ್ರಾಕೃತಿ, ವಕಾರಪ್ರಣವ, ಬೇರಿಸಾದ, ಪ್ರಾಣಲಿಂಗಯೆಂಬ ಪಿಂಡ, ಅನಾಹತಚಕ್ರ, ಮುತ್ತಿನವರ್ನ, ಪ್ರಾಣಲಿಂಗೆಯಂಬ ಮೂರ್ತಿ, ವಾಯುವಂಗನಿರ್ಮಲಾತರ ನಿರ್ಮಲತನು, ದುಸಹಸ್ತ, ಜಂಗಮಲಿಂಗ, ತ್ವಕ್ಕೆಂಬ ಮುಖ ಆಧಿಶತ್ಕಿ, ಅನುಭವಶಕ್ತಿ, ಸ್ಪರ್ಶಪಪಾರ್ಥ, ಸುಸ್ಪರ್ಶ ಪ್ರಸಾದ, ಈಶ್ವರ ಪೂಜಾತಿ, ಭೀಮನದಿದೈವ, ಶಾಂತಿಕಲೆ, ಅಮೂರ್ತಿ ಸಾಪಾಖ್ಯ,

ನಿತ್ಯವೆಂಬ ಲಕ್ಷಣ ಲಿಂಗಕ್ಷೇತ್ರವೆಂಬ ಸಂಜ್ಞೆ, ತತ್ಪುರಷವಕ್ತ್ರ, ಅಥರ್ವಣವೇಧ, ಇಂತಿವೆಲ್ಲವು ಇಸ್ಸಲಿಂಗದ ಗೋಮುಖದಲ್ಲಿ ಸಂಬಂಧವು, ದರ್ಪಣಾಕ್ರುತಿ, ಯಕಾರಪ್ರಣಪ, ಮೇಘನಾದ, ಶರಣನೆಂಬ ಪಿಂಡ, ವಿಶುದ್ಧಿ ಚಕ್ರ, ವೈರ್ಪೋರ್ಯದ ವರ್ಣ, ಶರಣೆಂಬ ಮೂರ್ತಿ, ಅಕಾಶವಂಗ, ಶುದ್ಧಾರ್ತ, ಆನಂದತನು, ಸುಜ್ಞಾನಹಸ್ತ, ಪ್ರಸಾದಲಿಂಗ, ಶ್ರೋತ್ರ ಮುಖ, ಪಾಶಕ್ತಿ, ಆನಂದಭಕ್ತಿ, ಶಬ್ಧ ಪಪಾರ್ಥ, ಸುಶಬ್ಧ, ಪ್ರಸಾದ, ಸದಾಶಿವಪೂಜಾರಿ, ಮಹಾದೇವರನಧಿದೈವ, ಶಾಂತೃತೀತಕಲೆ, ಶಿವ ಸಾಪಾಖ್ಯ ಪರಿಪೂರ್ಣವೆಂಬ ಲಕ್ಷಣ, ಅನಾಧಿಪತ್ ಎಂಬ ಸಂಜ್ಞೆ ಈಶಾನವಕ್ತ್ರ ಅಜಪವೇದ ಇಂತಿವೆಲ್ಲವು ಇಸ್ಸಲಿಂಗದ ನಾಳದಲ್ಲಿ ಸಂಬಂಧವು, ಜ್ಯೋರ್ತಿರಾಕೃತಿ ಓಂಕಾರ, ಪುಣಪ್ರಸಾದ ಐಕ್ಕನೆಂಬ ಪಿಂಪ, ಆಜ್ಞಾಚಕ್ರ, ಎಳೆಯ ಮಾಣಿಕ್ಯವರ್ನ, ಆತ್ಮನೆಂಬ ಅಂಗ, ಜ್ಞಾಣಾತ್ಮ ಐಕ್ಯನೆಂಬ ಮೂರ್ತಿ ಶುದ್ಧರನು ಸಪ್ಪಾಪಹಸ್ತ, ಮಹಾಲಿಂಗ, ಹೃದಯಮುಖ ಚಿಚ್ಛಕ್ತಿ, ಸಮರಸಭಕ್ತಿ, ತೃಪ್ತಿ ಪದಾರ್ಥ, ಸುತ್ರುಪ್ತಿಪ್ರಸಾದ, ಪರಶಿವ ಪೂಜಾರಿ, ಮಹಾಶ್ರೀಗುರುವಾದಿದೈವ, ಶಾಂತ್ಯತೀತ್ತೊರೆ ಎಂಬ ಕಲೆ ಮಹಾಸೈದ್ಯಕ್ಕಾ, ಅಖಂಡವೆಂಬ ಲಕ್ಷಣ ಮಹಾಸಂಜ್ಞೆ, ಗೌಪ್ಯವಕ್ತ್ರ, ಗಾಯಿತಿ ವೇದ, ಇಂತಿಮಲ್ಲವು, ಇಸ್ಸಲಿಂಗದ ಗೋಳಾಕಾರದಲ್ಲಿ ಸಂಬಂಧವು ನಿಷ್ಪಾಲಾಕೃತಿ, ಭೀಕಾರ ಪ್ರಣಪ, ಸುನಂದ, ಚಿಚ್‌ಗಣಸಂಬ ಪಿಂಡ, ಬ್ರಹ್ಮಚಕ್ರ, ಗೋಮೇಧಿರವರ್ಣ, ತ್ಯಾಗಾಂಗ, ಮಹಾತ್ಮ, ನಿಃಕಲನೆಂಬ ಭಕ್ತಿ, ಚಿದ್ರೋಪಾತನು ನಿರ್ಜವ ಹಸ್ತ, ಇಸ್ಸಲಿಂಗ, ಪರಬ್ರಹ್ಮವೆಂಬ ಮುಖ, ಅಸಾಮಾಯಶಕ್ತಿ, ಪರಿಪೂರ್ಣಭಕ್ತಿ, ಆನಂದವೆಂಬ ರೂಪಪದಾರ್ಥ ಅವಿಕಾಳ ಶುದ್ಧಪ್ರಸಾದ, ಅಗಣಿತನೆಂಬ ಪೂಜಾರಿ, ಪಾದೋದ್ಭವಪಾನದಿ ದೈವ, ಅನಾಧಿವೆಂಬ ಕಲೆ , ನಿರ್ಮಾಯ ಸಾದತ್ಯ ಅಸಾಮಯಾವೆಯಿಲ ಲಕ್ಷಣ, ನಿರ್ನಾಣವೆಂಬ ಸಂಜ್ಞೆ, ತಾರಾಬ್ರಹ್ಮವೆಂಬ ವಕ್ತ್ರ, ಗಾಂಧರ್ವವೇದ, ಇಂತೆಲ್ಲವು ಇಸ್ಸಲಿಂಗದ ಆಜ್ಯಾಪ್ರಪಾರಿಕೆಯಲ್ಲಿ ಸಂಬಂಧವು ನಿರಾಳಕೃತಿ, ಕ್ಷಕಾರಪುಣವ ಅಗಣಿತನಾದ ಚಿನ್ಮಯನೆಂಬ ಪಿಂಡ, ಶಿಖಾಚಕ್ರ, ಪಶ್ಯವರ್ಣ, ಪಶ್ಯಮಾವಾಯೋಗಾಂಗ, ಚಿಪಾರ್ತ ನಿರಾಳವೆಂಬ ಭಕ್ತ, ಚಿನ್ಮಯಲೆಸು ನಿರ್ಮಾಯಹಸ್ತ, ಶೂನ್ಯ ಸ್ವರೂಪಪ್ತಿ, ಪ್ರಾಣಲಿಂಗ ಅಭ್ಯಾಶಿಖಯೆಂಬ ಮುಖ ನಿಬ್ರಾಂತಶಕ್ತಿ, ಅಪ್ರಾವದರ್ಶನ ಭಕ್ತಿ, ರುಚಿಪದಾರ್ಥ ಶುರುಚಿಪ್ರಸಾದ, ಅಪುಮಣವೆಂಬ ಪೂಜಾರಿ ಚಿದ್ದಿಂಪುವೆಸುನೆಂಬ ಅಧಿದೈವ ನಿರೂಪಮಕಲೆ, ಅವಿರಳಸಾಧಕ್ಯ, ಅಗಮ್ಯವೆಂಬ ಲಕ್ಷಣ, ಅಪುಪೂಣವೆಂಬ ಸಂಜ್ಞೆ, ಸುರಾಳವೆಂಬ ಪತ್ರ, ಧನುರ್ವೇದ, ಇಂತಿ ಎಲ್ಲವೂ ನಿಶೂನ್ಯ ಸ್ವರೂಪವೆಪ್ಪ ಪ್ರಾಣಲಿಂಗದ ಅಭಿಶಕ್ತಿಯಲ್ಲಿ ಸಂಬಂಧದು ಏಕಾನಿರಂಜನಾಕೃತಿ ಆಕಾರ ಪ್ರಾಣಪ ದಿವ್ಯನಾದ ಚಿನ್ಮೂರ್ತಿಯೆಂಬ ಪಿಂಡ, ಪಶ್ಚಿಮ ಚರ್ಕ ವಜ್ರಾದ ವರ್ಣ, ಭೋಗಾಂಗ ದಿಪ್ಯಾರ್ತ, ನಿರಂಜನೆಂಬ ಶರಣ, ನಿರ್ಮಲಾತನು, ನಿರಾಳಹಸ್ತ, ನಿರಂಜನ ಸ್ವರೂಪವ್ಯಾಪ್ತಿ, ಭಾವಲಿಂಗ ಉರ್ನನೀಯನಂಬ ಮುಖ, ನಿರ್ಭೀತಶಕ್ತಿ ನಿರಂಜನಭಕ್ತಿ , ಪರಮಾಮೃತ ಪದಾರ್ಥ, ಪರಿಪೂರ್ಣವೆಂಬ ಪ್ರಸಿದ್ದಹ್ ಪ್ರಸಾದ, ಬಾಲೇಶ್ವರನೆಂಬ ಪೂಜಾರಿ , ಚಿತ್ತೋರ್ಯಸಧಿದೇವತೆ, ನಿರ್ಪಾಜಕಲೆ, ನಿರ್ಮಾಕ್ತಿ ಸಾವ್ಯಾ , ಅಪ್ರಮಾಣವೆಂಬ ಲಕ್ಷಣ, ಅನಿರಳಿ ಸಂಜ್ಞೆ, ಜ್ಞಾನಶೂನ್ಯ ಮಹಾಜ್ಯೋತಿ ದಿವ್ಯನಾದ ಗೋಷದಿಕ್ಕು, ನಿರಂಜನನೆಂಬ ವಕ್ತ್ರ, ಕಣ್ವವೇದ, ಇಂತಿವಿಲ್ಲವು ಅದೇ ಇಸ್ಸಾಲಿಂಗಪ ಇಂದಿಸೆಯರ್ಲಿಪ್ಪ ನಿರಂಜನ ಸ್ವರೂಪಪ್ಪ ಚಿವಾಜ್ಯಾದಲ್ಲಿ ಸಂಬಂಧವು ರೂಪಲ ಚನ್ನಸಂಗಮದೇವ ಎಂಬ

ಚೆನ್ನಬಸವಣ್ಣನ ಕರಣ ಹಾಸಿಗೆಯ 'ಅ' ಯಿಂದ 'ಳ' ರವರೆ ಅಪಿಯಿಂದ ಮುಡಿವರೆಗೆ ವಿವರಿಸಿದ್ದಾರೆ.

"ಓಂ"ಕಾರ ಉತ್ಪತ್ತಿ




=೫೨ ಅಕ್ಷರಗಳು

ಸರ್ವಸಕಲವೇದ, ಶಾಸ್ತ್ರ, ಪುರಾಣ, ಟೀಕೆ, ಧರ್ಮಗ್ರಂಥಗಳು, ಮಂತ್ರ, ವೈದ್ಯ, ಇತಿಹಾಸ, ಅನಂತತ್ವ, ಬ್ರಹ್ಮಾಂಡ, ಷಡದ್ವ, ಷಡ್ಗುಣ, ತತ್ವ, ಪಂಚಕ, ಮುಂತಾದವುಗಳ ಮೂಲ ಕಾರಣವೆನಿಸಿದವು, 'ಅ' ಕಾರ 'ಉ' ಕಾರ 'ಮ' ಕಾರಗಳನ್ನು ಪ್ರಣವತ್ರಯಗಳೆಂದು ಹೇಳುವರು ೬೫, ಏಳುಕೋಟಿ ಮಹಾಮಂತ್ರಗಳಲ್ಲಿಯೇ ಅತ್ಯಂತ ಶ್ರೇಷ್ಟ ಮಹಾಮಂತ್ರ, "ಓಂಕಾರವು ಪ್ರಧಾನವೆನಿಸಿದೆ . ಸೃಷ್ಟಿಕರ್ತನೇ ಓಂಕಾರ, "ಓಂ"ಕಾರದಿಂದಲೇ ಮಹಾಪದವಿಗಳು ಈ "ಓಂ" ಕಾರ ಮಹಾಲಿಂಗದಿಂದಲೇ ಸಚರಾಚರ ಸರ್ವ ಸೃಷ್ಟಿಯಾಗಿರುವುದು "ಓಂ" ಕಾರವೆ ನಾದ "ಓಂ" ಕಾರವೇ ಬಿಂದು "ಓಂ" ಕಾರವೇ ಕಳಾತೀತ, ಬ್ರಹ್ಮಾಂಡವೆಲ್ಲ "ಓಂ" ಕಾರಮಯವಾಗಿರುವುದು ಸಾಕಲ್ಯ ಪ್ರಣವವೇ "ಓಂ" ಕಾರ ಸ್ವರೂಪವಾದ "ಓಂ" ಕಾರವು ಪರಮಯೋಗಿಗಳ ಶ್ರೇಷ್ಟ, ಶುದ್ಧ ಮಹಾಮಂತ್ರವಾಗಿದೆ.

ನವದ್ವಾರಗಳಲ್ಲಿ ಅಕ್ಷರಗಳ ಉತ್ಪತ್ತಿ :-

ಚೆನ್ನ ಬಸವಣ್ಣನವರು ಇಡಿ ಕನ್ನಡ ಸಾಹಿತ್ಯಕ್ಕೆ ದೊಡ್ಡ ಆಸ್ತಿ ಮತ್ತು ಕೊಡುಗೆಯಾಗಿದ್ದಾರೆ. ಕನ್ನಡದಲ್ಲಿ ಕಾವ್ಯಗಳು ಹುಟ್ಟಿದ್ದು, ಕ್ರಿ.ಪೂ. ೪೫೦ ಹಲ್ಮಿಡಿ ಶಾಸನದಿಂದ ತಿಳಿದು ಬರುತ್ತದೆ. ಆದರೆ ಅಕ್ಷರಗಳು ನವದ್ವಾರಗಳಲ್ಲಿ ಅಡಗಿದೆ ಎಂದು ಹೇಳಿದ ಮೊಟ್ಟ ಮೊದಲ ದೇಹಾತ್ಮ ತಜ್ಞನಾದ ಚೆನ್ನಬಸವಣ್ಣ ನವರ ಕರಣ ಹಸಿಗೆಯಿಂದ

ತಿಳಿಯಲ್ಪಡುತ್ತವೆ. ಅಖಂಡಜ್ಯೋತಿರ್ಮಯವಾಗಿರುವ ಗೋಳಾಕಾರ ಆಕಾರದ ಪ್ರಣವ ಜ್ಯೋತಿಯಲ್ಲಿರುವ ಜೀವಾತ್ಮ, ಪರಮಾತ್ಮದಲ್ಲಿ ಜೀವಹಂಸ, ಪರಮ ಹಂಸಗಳು ಸೃಷ್ಟಿಯಾಗಿ ಆಜ್ಞಾಂಚಕ್ರದ ದ್ವಿದಳ ಪದ್ಮವಲಿ ಅಡಗಿವವು ಎಂಬ ವಿಸ್ಮಯದ ನವಚಕ್ರದ ಅಕ್ಷರ ಉತ್ಪತ್ತಿ ಈ ರೀತಿಯಾಗಿದೆ.

(೧) **ಗುದಸ್ಥಾನದಲ್ಲಿ ಅಧಾರ ಚಕ್ರ** :- ಅಲ್ಲಿಗೆ ಪೃಥ್ವಿಯೆಂಬ ಮಹಾಭೂತ ಸದ್ಯೋಜಾತವಕ್ತ್ರ

**ಬ್ರಹ್ಮ** :- ಪೂಜಾರಿ ಸುವರ್ಣದ ತೇಜ, ಬಾಲರವಿಕೋಟ ಪ್ರಕಾಶ, ನಾಲ್ಕೆಸಳಿನ ತಾವರೆಯ ಮಧ್ಯದಲ್ಲಿ

**ಸುವರ್ಣಮಯಲಿಂಗ** – ಅದು ಅಚಾರಲಿಂಗ, ಅದಕ್ಕೆ ಭೀಜಾಕ್ಷರ, ಓಂ ನಾಂ ನಾಂ ನಾಂ ಎಂಬ ನಾದಘೋಷ, ಎಸಳು ನಾಲ್ಕರಲ್ಲಿ ವ.ಶ.ಷ.ಸ. ಎಂಬ ನಾಲ್ಕಕ್ಷರ

ಅದು ದೇವರಿಗೆ ತಮಗೂ ಪಶ್ಚಿಮಮುಖ ಸದ್ಯೋಜಾತ ವಕ್ತ್ರ ಅಧಾರ ಚಕ್ರ.

(೨) **ಲಿಂಗಸ್ಥಾನದಲ್ಲಿ ಸ್ವಾಧಿಷ್ಟಾನಚಕ್ರ** :- ಅಲ್ಲಿಗೆ ಅಪ್ಪುವೆಂಬ ಮಹಾಭೂತ, ವಾಮದೇವವಕ್ತ್ರ, ವಿಷ್ಣು ಪೂಜಾರಿ, ನೀಲದತೇಜ, ಬಾಲದ್ವಿಕೋಟಿಸೂರ್ಯ ಪ್ರಕಾಶ, ಅರೆನಳಿನ ತಾವರೆಯ ಮಧ್ಯದಲ್ಲಿ ಗೋಕ್ಷೀರದ ಹಾಗೆ ಧವಳ ವರ್ಣದ ಲಿಂಗ ಅದು ಗುರುಲಿಂಗ ಅದಕ್ಕೆ ಬೀಜಾಕ್ಷರ ಓಂ ಮಾಂ ಮಾಂ ಮಾಂ ಎಂಬ ನಾದಘೋಷ, ಎಸಳು ಆರರಲ್ಲಿ ಬ.ಭ.ಮ.ಯ.ರ.ಲ. ಎಂಬ ಷಡಕ್ಷರ ಅದು ದೇವರಿಗೂ ತಮಗೂ ಉತ್ತರ ಮುಖ ವಾಮದೇವವಕ್ತ್ರ ಸ್ವಾಧಿಷ್ಠಾನಚಕ್ರ.

(೩) **ನಾಭಿಸ್ಥಾನದಲ್ಲಿ ಮಣಿಪೂರಕ ಚಕ್ರ** :- ಅಲ್ಲಿಗೆ ಅಗ್ನಿಯೆಂಬ ಮಹಾಭೂತ, ಅಘೋರಚಕ್ತ್ರ, ರುದ್ರಪೂಜಾರಿ ಮಾಣಿಕ್ಯ ತೇಜ, ಬಾಲತ್ರಿ ಕೋಟಿಸೂರ್ಯಪ್ರಕಾಶ.

ಹತ್ತೆಸಳಿನತಾವರೆಯ ಮಧ್ಯದಲ್ಲಿ

ಮಾಣಿಕ್ಯ ವರ್ಣದ ಲಿಂಗ ಅದು ಶಿವಲಿಂಗ ಅದಕ್ಕೆ ಬೀಜಾಕ್ಷರ ಓಂ ಶಿಂ ಶಿಂ ಶಿಂ ಎಂಬ ನಾದಘೋಷ.

ಎಸಳು ಹತ್ತರಲ್ಲಿ ಡ.ಢ,ಣ,ತ,ಥ,ದ,ಧ, ನ.ಪ. ಫ ಎಂಬ ದಶಾಕ್ಷರ ಅದು ದೇವರಿಗೂ ತಮಗೂ ದಕ್ಷಿಣ ಮುಖ ಅಘೋರ ವಕ್ತ್ರ , ಮಣಿಪೂರಕ ಚಕ್ರ.

(೪) **ಹೃದಯ ಸ್ಥಾನದಲ್ಲಿ ಅನಾಹುತ ಚಕ್ರ** :- ಅಲ್ಲಿಗೆ ವಾಯುವೆಂಬ ಮಹಾಭೂತ, ತತ್ಪುರುಷವಕ್ತ್ರ, ಈಶ್ವರ ಪೂಜಾರಿ ಕಪೋತವರ್ಣದ ತೇಜ, ಬಾಲಚತುಷ್ಕೋಟಿ ಸೂರ್ಯ ಪ್ರಕಾಶ, ಹನ್ನೆರಡೆಸಳಿನ ತಾವರೆಯ ಮಧ್ಯದಲ್ಲಿ ಶುದ್ಧ ಪಂಚವರ್ಣದಲಿಂಗ ಅದು ಜಂಗಮ ಲಿಂಗ, ಅದಕ್ಕೆ ಬೀಜಾಕ್ಷರಂ
ಓಂ ವಾಂ ವಾಂ ವಾಂ ಎಂಬ ನಾದಘೋಷ

ಎಸಳು ಹನ್ನೆರಡರಲ್ಲಿ ಕ.ಖ.ಗ ಚ, ಛ, ಜ, ಝ, ಞ ಟ.ಠ ಎಂಬ ದ್ವಾದಶಾಕ್ಷರ ಅದು ದೇವರಿಗೂ ತಮಗೂ ಪೂರ್ವಮುಖ ತತ್ಪುರುಷ ವಕ್ತ್ರ ಅನಾಹತ ಚಕ್ರ

(೫) **ಕಂಠಸ್ಥಾನದಲ್ಲಿ ವಿಶುದ್ಧಿ ಚಕ್ರ :-** ಅಲ್ಲಿಗೆ ಆಕಾಶವೆಂಬ ಮಹಾಭೂತ, ಈಶಾನವಕ್ತ್ರ, ಸದಾಶಿವ ಪೂಜಾರಿ, ವಿದ್ಯುಲ್ಲತೆಯ ತೇಜ, ಬಾಲಪಂಚಕೋಟಿ ಸೂರ್ಯಪ್ರಕಾಶ, ಹದಿನಾರೆಸಳಿನ ತಾವರೆಯ ಮಧ್ಯದಲ್ಲಿ ಅನಂತಕೋಟಿ ಮಿಂಚುಗಳ ವರ್ಣದಲಿಂಗ ಅದು ಪ್ರಸಾದಲಿಂಗ.

ಓಂ ಯಾಂ ಯಾಂ ಯಾಂ ಎಂಬ ನಾದ ಘೋಷ ಎಸಳು, ಹದಿನಾರರಲ್ಲಿ ಅ.ಆ.ಇ.ಈ. ಉ.ಊ. ಋ. ೠ, ಎ.ಐ. ಓ ಔ, ಅಂ ಅಃ ಎಂಬ ಘೊಡಾಕ್ಷರ ಅದು ದೇವರಿಗೂ ತಮಗೂ ಉರ್ದ್ವಮುಖ ಈಶಾಸನ ವಕ್ತ್ರ ವಿಶುದ್ಧಿ ಚಕ್ರ

(೬) **ಭ್ರೂ ಮಧ್ಯದಲ್ಲಿ ಅಜ್ಞಾಚಕ್ರ :-** ಅಲ್ಲಿಗೆ ಮನವೆಂಬ ಮಹಾಭೂತ, ಶ್ರೀ ಗುರುವೆ ವಕ್ತ್ರ ಮಾಹೇ

ಶ್ವರಿ ಪೂಜಾರಿ ಜ್ಯೋತಿರ್ವಣದ ತೇಜ ಬಾಲಕ್ಷಕೋಟಿ ಸೂರ್ಯಪ್ರಕಾಶ

ಎರಡೆಸಳಿನ ತಾವರೆಯ ಮಧ್ಯದಲ್ಲಿ ಶ್ರೀಗುರುವಿನ ಶ್ರೀಪಾದದ ವರ್ಣದ ಲಿಂಗ ಎಡಗಡೆಯ ಪಾದ ಕೆಂಪು ವರ್ಣ

ಬಲಗಡೆಯ ಪಾದ ಶ್ವೇತವರ್ಣ – ಅದು ಮಹಾಲಿಂಗ, ಅದಕ್ಕೆ ಬೀಜಾಕ್ಷರ 'ಓಂ'ಕಾರ ನಾದಘೋಷ

ಎಸಳೆರಡರಲ್ಲಿ ಅಕ್ಷರ ಹಂ. ಸಂ. ಎಂಬ (ಎರಡಕ್ಷರ) ಅದು ದೇವರಿಗೂ ತನಗು ಗಂಬೀರಮುಖ ಶ್ರೀಗುರುವಕ್ತ್ರ ,ಆಜ್ಞಚಕ್ರ

(೭) **ಬ್ರಹ್ಮರಂಧ್ರದಲ್ಲಿ ಬ್ರಹ್ಮ ಚಕ್ರ :-** ಬ್ರಹ್ಮ ಚಕ್ರ ಅಲ್ಲಿಗೆ ಚಂದ್ರನೆಂಬ ಮಾಹಾಭೂತ, ಲಿಂಗವಕ್ತ್ರ ಪರಮೇಶ್ವಂರ ಪೂಜಾರಿ, ಮಹಾಜ್ಯೋರ್ತಿವರ್ಣದ ತೇಜ, ಬಾಲ ಅನಂತಕೋಟಿ ಸೂರ್ಯಪ್ರಕಾಶ

ಒಂದುನೂರ ಎಂಟು ಸಾವಿರೆಸಳಿನ ತಾವರೆಯ ಮಧ್ಯದಲ್ಲಿ ಮಹಾ ಜ್ಯೋತಿರ್ವರ್ಣಪ ಲಿಂಗ

ಅದು ನಿರಾಮಯ ಲಿಂಗ, ಅದಕ್ಕೆ ಬೀಜಾಕ್ಷರ ಪ್ರಣವನಾದ ಘೋಷ, ಎಸಳೊಂದುನೂರ ಎಂಟು ಸಾವಿರದಲ್ಲಿ ಒಂದ ನೂರ ಎಂಟು ಸಾವಿರ ಅಕ್ಷರ.

**ಪ್ರೇತಾಸನ ವಿಶ್ವತೋಮುಖೋ ಬ್ರಹ್ಮಚಕ್ರ :-** ವಿಶ್ವತಶ್ಚಕ್ಷುರುತ ವಿಶ್ವತೋ ಮುಖೋ
ವಿಶ್ವತೋ ಬಾಹುರತ ವಿಶ್ವತಃ ಪಾತ್।
ಸಂ ಬಾಹ್ಯಬ್ಯಾಂ ಧಮತಿ ಸಂಪತತ್ರ್ಯ
ದ್ಯಾವಾ ಭೂಮಿ ಜನಯನ್ ದೇವ ಏಕಃ ॥

(೮) **ಶಿಖಾಚಕ್ರ :-** ಟ. ಸಾ.ಕ್ಷ ಈ ೩೬ ಅಕ್ಷರಗಳು ಇವೆ

(೯) **ಪಶ್ಚಿಮ ಚಕ್ರದಲ್ಲಿಯ** ಓಂ. ಯ.ಓಂ ನಾಲ್ಕು ಅಕ್ಷರಗಳಲ್ಲಿ ಇಂತಿ ಗುರುವಿನ ಬೆಳಗು ವಿಶ್ವವನ್ನ ಪಹರಿಸಿ ತಾನು ತಾನೇ ಸೋಹಂ ಪ್ರಕಾಶ ಕೂಡಲ ಚೆನ್ನ ಸಂಗಮ ದೇವಾಹೆಂಬ ತತ್ವವ ಕರಣ ಹಸಿಗೆಯಲ್ಲಿ ವ್ಯಕ್ತವಾಗುತ್ತದೆ.

**ಜಗದುತ್ಪತ್ತಿ :-**

ಡಾ। ಆರ್.ಸಿ. ಹಿರೇಮಠರು ಸಂಪಾದಿಸಿದ ಚನ್ನ ಬಸವಣ್ಣನವರ ಇತರ ಸಾಹಿತ್ಯದ ಕರಣ ಹಸಿಗೆಯಲ್ಲಿ ಜಗದುತ್ಪತ್ತಿಯ ಈ ರೀತಿಯಾಗಿರುವುದು.

ಭೂಜಲಾಗ್ನೀಮರು ಧ್ವೇಮ ಬಾಸ್ಕರಾ ಶ್ಯಶಿ ಚೇತನಾ ॥

ದಿವಾ ಪ್ರಕಾಶತೆ ಸೂರ್ಯೋ ರಾತ್ರಾ ಚಂದ: ಪ್ರಕಾಶತೇ। ಶಿವನ ಅಷ್ಟತನುಗಳು

ಸರ್ವ ಚೇತನ ಆತ್ಮಚ ಶಿವಮಾಕೋಪ್ಯಷ್ಠ ಮೂರ್ತಯಂಟು

**ಶಿವನ ಅಷ್ಟತನುಗಳು**




ಇವೆ ಜಗತ್ತಾಗಿರುವುದು "ಚತುರ್ದಶ" ಭೂವನಗಳು, ಸಮುದ್ರಗಳು, ಸಪ್ತದ್ವೀಪಗಳು, ಸಪ್ತಕುಲ ಪರ್ವತಗಳ ಸಮಸ್ತ ಗ್ರಹರಾಶಿಗಳು, ತಾರಪಥಗಳು ಇವುಗಳನ್ನು ಗರ್ಭೀಕರಿಸಿಕೊಂಡಿವುದೇ ಈ ಜಗತ್ತು ಇದು ೩೬ ತತ್ವಗಳಿಂದಾಗಿದೆ ಡಾ॥ ಆರ್.ಸಿ. ಹಿರೇಮಠರು ತಮ್ಮ ಮಹಾಯಾತ್ರೆ ಕೃತಿಯಲ್ಲಿ ಪರಶಿವ ಪರಾಶಕ್ತಿ ಕುರಿತು ಹೇಳುವಾಗ ಈ ಜಗತ್ತು ೩೬ ತತ್ವಗಳ ವ್ಯವಸ್ಥೆಯನ್ನು ಹೀಗೆ ಕೊಡುತ್ತಾರೆ.

ಬ್ರಹ್ಮಾಂಡ

**ಬ್ಬಬ್ರಹ್ಮಾಂಡ**

ಆತ್ಮ ತತ್ವಗಳು

**ಆತ್ಮತತ್ವಗಳು – ೨೫**

| ಪಂಚಭೂತಗಳು | ಪಂಚಜ್ಞಾನೇಂದ್ರಿಯಗಳು | ಪಂಚ ಕರ್ಮೇಂದ್ರಿಯಗಳು | ಅಂತಃ ಕರಣಗಳು | ಪಂಚವಾಯುಗಳು |
|---|---|---|---|---|
| ಭೂಮಿ | ಕಿವಿ | ವಾಕ್ | ಅಹಂಕಾರ | ಪ್ರಾಣ |
| ನೀರು | ಕಣ್ಣು | ಪಾಣಿ | ಮನಸ್ತು (ಚಿತ್ತ) | ಅಪಾನ |
| ಅಗ್ನಿ | ಮೂಗು | ಪಾದ | ಬುದ್ಧಿ | ವ್ಯಾನ |
| ವಾಯು | ನಾಲಗೆ | ಪಾಯ್ಯು | ಪ್ರಕೃತಿ | ಉದಾನ |
| ಆಕಾಶ | ಚರ್ಮ | ಉಪಸ್ಥ | ಪುರುಷ | ಸಮಾನ |

ಬ್ರಹ್ಮಾಂಡ

೩೬ ತತ್ವ

| ವಿದ್ಯತತ್ವಗಳು–೧೦ | ಆತ್ಮತತ್ವಗಳು –೨೫ | ಶಿವತತ್ವ –೧ |
|---|---|---|
| ಪಂಚಸದಖ್ಯಗಳು | ಪಂಚಕಲೆಗಳು<br>ಶಕ್ತಿಗಳು | ಪಂಚಭೂತಗಳ –೫ |
| ಶಿವಸಾದಾಖ್ಯ | ನಿವೃತ್ತಿ | ಪಂಚಜ್ಞಾನೇಂದ್ರಿಯಗಳು |
| ಅಮುರ್ತಸಾದಾಖ್ಯ | ಪ್ರತಿಷ್ಠ | ಪಂಚಜ್ಞಾನೇಂದ್ರಿಯಗಳು |
| ಮೂರ್ತ ಸಾದಾಖ್ಯ | ವಿದ್ಯಾ | ಪಂಚಕರ್ಮೋಂದ್ರಿಯಗಳು |
| ಕತೃಸಾದಾಖ್ಯ | ಶಾಂತಿ | ಅಂತಃ ಕರಣಗಳು |
| ಕರ್ಮಸಾದಾಖ್ಯ | ಶಾತ್ಯಾತೀತ | ಪಂಚವಾಯುಗಳು –೫ |

ಜಗತ್ತು ಉತ್ಪತ್ತಿಯಾಗಿರುವುದನ್ನು ಚನ್ನಬಸವಣ್ಣ ನವರು ತಾತ್ವಿಕ ತಳಹದಿಯ ಮೇಲೆ ಸಂಯೋಜಿಸಿದ್ದಾರೆ ಇದು ವೀರಶೈವರು , ಲಿಂಗಾಯುತರು ಪ್ರತಿಪಾದಿಸುವ ಸರಿಯಾದ ತತ್ವ ದರ್ಶನಗಳಾಗಿವೆ.




ಇವು ಸೃಷ್ಟಿಯಾಗಿ ಜಗತ್ತಿನಲ್ಲಿ ಜೀವಿಸುವ ಜೀವಿಗಳಿಗೆ ಅವಶ್ಯಕ ಬಿಳತೆಗಳಾಗಿವೆ, ಮುಂದೆ ಏಳು ಲೋಕಗಳಾದ ಭೂಲೋಕ, ಭುವರ್ಲೋಕ, ಸುವರ್ಲೋಕ, ಮಹಾಲೋಕ, ಜನಲೋಕ, ತಪೋಲೋಕ, ಸತ್ಯಲೋಕ, ಮೇಲ್ ಲೋಕಗಳ್ ಹಾಗೂ ಅತಳ, ವಿತಳ, ಸುತಳ, ತಳಾತಳ ಹಿಮಾ ತಳ ರಸಾತಳ, ಪಾತಾಳವೆಂಬ ಕೆಳಲೋಕಗಳು ಒಟ್ಟುಗಳು ಲೋಕಗಳು, ಶಿವಶಕ್ತಿ, ತತ್ವಗಳಿಂದ ಅವವು ಈ ಲೋಕಗಳ ಪರಿಕಲ್ಪನೆಗಳು ವಾಸ್ತವವಾಗಿ ನಮಗೆಂದಿಗೂ ಕಂಡು ಬರುವುದಿಲ್ಲ. ಬಸವಣ್ಣನವರೇ ಹೇಳಿರುವಂತೆ ಸತ್ಯವ ನುಡಿವುದೇ ದೇವಲೋಕ ಮಿಥ್ಯವ ನುಡಿವುದೇ ದೇವಲೋಕ ಮಿದ್ಯವ ನುಡಿವುದೇ ಮರ್ತ್ಯ ಲೋಕ ಎಂದು ಎರಡು ಲೋಕಗಳು ಕಲ್ಪನೆಯನ್ನು ಹೇಳಿರುವರು ಆದರೇ ಈ ೧೪ ಲೋಕಗಳು ವೈಜ್ಞಾನಿಕ ಯುಗದಲ್ಲಿ ನಂಬಲಸಾಧ್ಯವಾದರು ರಹಸ್ಯಮಯವಾದ ಈ ಸೃಷ್ಟಿಯಲ್ಲಿ ಇದ್ದರು ಇರಬಹುದು ಆದರೇ ಇವುಗಳ ಯಾವ ಆಧಾರವು ನಮಗೆ ಉಪಲಬ್ಧವಾಗಿಲ್ಲ ಆದರೆ ತಾತ್ವಿತ ವಿವೇಚನೆಯ ಹಿನ್ನೆಲೆಯಲ್ಲಿ ಇವುಗಳನ್ನು ಹೆಸರಿಸಬಹುದಾಗಿದೆ.

### ಸಪ್ತ ಸಮುದ್ರಗಳು

ಲವಣ ಇಕ್ಕು ಸುರ ಸರ್ವೆ ದಧಿ ದುಗ್ಧ

ಜಲ ಉಪ್ಪಿನ ಕಬ್ಬಿನ ಸಾರಾಯಿ ತುಪ್ಪದ ಮೊಅರಿನ

ಕ್ಷೀರ ನೀರಿನ ಸಮುದ್ರ ಸಮುದ್ರ ಸಮುದ್ರ ಸಮುದ್ರ ಸಮುದ್ರ

ಸಮುದ್ರಸಮುದ್ರ

ಇವುಸಪ್ತ ಸಮುದ್ರಗಳಾಗಿವೆ ೨೬

**ಸಪ್ತ ದ್ವೀಪಗಳು**

| ಜಂಜೂ | ಪ್ಲಕ್ಷ | ಶಲ್ಮಲ | ಕುಶ | ಕೌಂಚ | ಶಾಕ |
|---|---|---|---|---|---|
| ಪುಷ್ಕರ | ದ್ವೀಪ | ದ್ವೀಪ | ದ್ವೀಪ | ದ್ವೀಪ | ದ್ವೀಪ |
| ದ್ವೀಪ | ದ್ವೀಪ | | | | |

ಎಂಬ ೭ ಭೂಖಂಡಗಳಿದ್ದವು ಅವುಗಳನ್ನು ಈ ಏಷ್ಯಖಂಡ ೨ ಉತ್ತರ ಅಮೇರಿಕ ಖಂಡ ೨, ದಕ್ಷಿಣ ಅಮೇರಿಕ ಖಂಡ , ೪, ಯುರೂಪ್ ಖಂಡ, ೫ ಆಫ್ರಿಕ ಖಂಡ , ೬ , ಅಂಟಾರ್ಟಿಕ್ ಖಂಡ, ೭, ಆಸ್ಟೇಲಿಯ ಖಂಡ, ೨೨ ಗಳಾಗಿವೆ.

**ಸಪ್ತ ಕುಲಪರ್ವತಗಳು**

| ಜಠ | ಹೇಮ | ಅರುಣ | ಶೃಂಗ | ಪೂರ್ವಾದ್ರಿ | ರಜತಾದ್ರಿ |
|---|---|---|---|---|---|
| ಸೀತಾದ್ರಿ | ರಾದ್ರಿ | ಕೂಟ | ಪರ್ವತ | ಪರ್ವತ | |

ಎಂಬ೭ ಗಿರಿಗಳು



**ಪಂಚಭೂತಗಳ ಕರಣ ಹಸಿಗೆಯ ಪಂಚೀಕರಣ**

ಈ ಸ್ಥೂಲ ಬ್ರಂಹಾಂಡದಲ್ಲಿ ಗುಣ ತತ್ವಗಳನ್ನು ಆಶ್ರಯಿಸಿ ಅತೀ, ಸೂಕ್ಷ್ಮ ರೂಪದಲ್ಲಿ ಅಡಗಿರುವ ಜೀವಾತ್ಮ ಶರೀರದ ಹಸಿಗೆ ಮಾಡಿ ತಿಳಿದು ಕೊಳ್ಳುವುದೇ ಈ ಅಧ್ಯಯನವಾಗಿದೆ.

ಮಹಾಭೂತಗಳ ಪಂಚೀಕೃತಿಯನ್ನು ತುಂಬಾ ಸರಳವಾಗಿ ಡಾ॥ ಎಸ್.ವಿ. ಅಯ್ಯನಗೌಡರ ಅವರ "ಮೈಲಾರ ಬಸವಲಿಂಗ ಶರಣರ ಜೀವನ ಹಾಗೂ ಸಮಗ್ರ ಕೃತಿ ದರ್ಶನ" ಮಾಹಾ ಪ್ರಬಂಧದ ಸಂಶೋಧನ ಗ್ರಂಥದಲ್ಲಿ ಪಂಚಭೂತಗಳ

**ಪಂಚೀಕರಣ ಕುರಿತು ಹೀಗೆ ಸ್ಪಷ್ಟ ಪಡಿಸುರಿವರು**

ಈಶಾನ್ಯ ಮುಖ : ಆಕಾಶ, ತತ್ವದಿಂದ, ಕರಣಗಳಾದ ಬೆತ್ತ, ಬುದ್ಧಿ, ಅಹಂಕಾರ, ಜ್ಞಾನ (ಅರಿವು) ಮನಗಳು

ಅಘೋರಮುಖ ; ಅಗ್ನಿ ತತ್ವದಿಂದ ಜ್ಞಾನೇಂದ್ರಿಯಗಳಾದ ಪ್ರಾಣ ಜಿಹ್ವೆ ನೇತ್ರ ಶೂತ್ರ, ತ್ವಕುಗಳು

ತತ್ಪುರುಷ ಮುಖ : ವಾಯು, ತತ್ವದಿಂದ, ವಾಯುಗಳಾದ ಪ್ರಾಣ, ಅಪಾನ, ವ್ಯಾನ, ಉದಾನ ಸಮನಕ್ಕೆ

ವಾವಾ ದೇವಮುಖ : ಅಪ್ಪ ತತ್ವದಿಂದ ಪಂಚ ವಿಷಯಗಳಾದ ಗಂಧ, ರಸ, ರೂಪ, ಸ್ಪರ್ಶ ಶಬ್ದಗಳು

ಸಧ್ಯೋಜಾತ : ಪೃಥ್ವಿ ತತ್ವದಿಂದ ಕರ್ಮೇಂದ್ರಿಗಳಾದ ಗುದ, ಗುಹ್ಯ, ಪಾದ, ಪಾಣಿ, ವಕುಗಳು ಹೀಗೆ ಐದು ಮುಖಗಳಿಂದ ಇವೆಲ್ಲವುಹು ಹುಟ್ಟಿ ಕೂಡಿದೆ.

"ಇಲ್ಲಿ ಪಂಚ ಭೂತಗಳಾದ ಈ ಕರ್ಮೇಂದ್ರಿಯಗಳು ೫ ಜ್ಞಾನೇಂದ್ರಿಯಗಳು ೫ ವಿಷಯಗಳು ೫ ವಾಯುಗಳು ೪ ಕಾರಣಗಳು ಮತು ೧ ಜೀವ ಹುಟ್ಟಿ ಕೊಂಡಿರುವುದು ಒಟ್ಟು ೨೪ ತತ್ವ ಹಸಿಗೆಗಳಾಗುವುದನ್ನು ನೋಡಬಹುದು " ೪೮ ಇದನ್ನೆಲ್ಲಾ ಅವಲೋಕಿಸದೆ ಅಂದಿನ ಅನುಭಾವಿಗಳಿಗೆ ವೈಜ್ಞಾನಿಕ ತಳಹದಿಯ ಶಾಸ್ತ್ರ ಜ್ಞಾನ ಅಗಾದವಾಗಿರುವುದು ಕಂಡುಬರುತ್ತದೆ. ಪಂಚೀಕತರಣವನ್ನು ಸಮರಗೊಳಿಸಿ ವಿಭಜಿಸಬಹುದು.

ಅದೇ ಶ್ರೀ ಚನ್ನಬಸವಣ್ಣ ನವರು ಹೇಳಿದ ಕರಣ ಹಸಿಗೆ ಪಂಚ ಭೂತಗಳ ಪಂಚೀಕರಣನವನ್ನು ಸಮರಗೊಳಿಸಿ ವಿಭಜಿಸಬಹುದು.

"ಪೃಥ್ವಿಯ ಪೃಥ್ವಿಯು ವಾಯುವು
ಪೃಥ್ವಿಯ ಅಪ್ಪವು ಗಂಧವು ಅಗ್ನೇಯೇ ಘ್ರಾಣಂ
ಪೃಥ್ವಿಯ ವಾಯುವೇ ಪ್ರಾಣಂ
ಪೃಥ್ವಿಯ ಆಕಾಶ ಚಿತ್ತ ಬಸವಪ್ರಭಾವೆ "

ಈ ಪದ್ಯದಲ್ಲಿರುವ ಪಂಚಕೃತಿಯ ಸಂಯೋಜನೆ ವಿವರ ವೀಕ್ಷಣ ಹಾಗೂ ಅಲ್ಲಿಂದ ಇಂದ್ರಿಯಗಳ ಹುಟ್ಟು ಬಗ್ಗೆ ಹೀಗಿರುವುದು

೧. ಪೃಥ್ವಿ (ಭೂಮಿ) ಯ ಪಂಚೀಕೃತಿ
ಪೃಥ್ವಿಯ ಪೃಥ್ವಿಯಿಂದ – ವಾಯು
ಪೃಥ್ವಿಯ ಅಪ್ಪುವಿನಿಂದ – ಗಂಧ
ಪೃಥ್ವಿಯ ಅಗ್ನಿಯಿಂದ – ಘ್ರಾಣ

ಪೃಥ್ವಿಯ ವಾಯುವಿನಿಂದ – ಪ್ರಾಣ

ಪೃಥ್ವಿಯಕಾರಣದಿಂದ –ಚಿತ್ತಗಳೆಂಬ ೫ ಇಂದ್ರಿಯಗಳು

೨. ಉದರ (ನೀರು) ದ ಪಂಚೀಕೃತಿ

ಉದಕದ ಪೃಥ್ವಿಯಿಂದ – ಗುಹ್ಯ

ಉದಕದ ಅಪ್ಪುವಿನಿಂದ – ರಸ

ಉದಕದ ಅಗ್ನಿಯಿಂದ – (ಜಿಹ್ವೆ) ನಾಲಿಗೆ

ಉದಕದ ವಾಯುವಿನಿಂದ – ಅಪಾನ

ಉದಕದ ಆಕಾರದಿಂದ – ಬುದ್ಧಿಗಳೆಂಬ ೫ ಇಂದ್ರಿಯಗಳು

೩. ಅಗ್ನಿ(ಬೆಂಕಿ) ಯ ಪಂಚೀಕೃತಿ

ಅಗ್ನಿಯ ಪೃಥಿಯಿಂದ – ಪಾದ

ಅಗ್ನಿಯ ಅಪ್ಪುವಿನಿಂದ – ರೂಪು

ಅಗ್ನಿಯ ಅಗ್ನಿಯಿಂದ – ನೇತ್ರ (ಕಣ್ಣು)

ಅಗ್ನಿಯ ವಾಯುವಿನಿಂದ – ವ್ಯಾವಾಯುನ

ಅಗ್ನಿಯ ಆಕಾಶದಿಂದ – ಆಹಂಕಾರ (ಹಮ್ಮು) ಗಳೆಂಬ ೫ ಇಂದ್ರಿಯಗಳು

೪. ವಾಯುವಿನ ಪಂಚೀಕೃತಿ

ವಾಯುವಿನ ಪೃಥ್ವಿ (ಭೂಮಿ) ಯಿಂದ – ಪಾಣಿ (ಕೈಗಳು)

ವಾಯುವಿನ ಅಪ್ಪುವಿನಿಂದ – ಸ್ಪರ್ಷ

ವಾಯುವಿನ ಅಗ್ನಿಯಿಂದ (ತೇಜ) – ತ್ವಕ್ಕು (ಚರ್ಮ)

ವಾಯುವಿನ ವಾಯುವಿನಿಂದ – ಉದಾನ (ಉಸಿರು, ಹೊಕ್ಕಳ)

ವಾಯುವಿನ ಆಕಾಶದಿಂದ – ಮನಸ್ಸುಗಳೆಂಬ ೫ ಇಂದ್ರಿಯಗಳು

೫. ಆಕಾಶ ಪಂಚೀಕೃತ

ಆಕಾಶದ ಪೃಥ್ವಿ ಯಿಂದ – ವಾಕು (ಮಾತು)

ಆಕಾಶದ ಅಪ್ಪುವಿನಿಂದ – ಶಬ್ಧ (ಧ್ವನಿ)

ಆಕಾಶದ ಅಗ್ನಿಯಿಂದ – ಶ್ರೋತ್ರ (ಕಿವಿ)

ಆಕಾಶದ ವಾಯುವಿನಿಂದ – ಸಮಾನ (ಪ್ರಾಣ)

ಆಕಾಶದ ಆಕಾಶದಿಂದ – ಜ್ಞಾನ (ಅರಿವು ( ೮೬ ಗಳೆಂಬ

ಈ ರೀತಿಯಾಗಿ ಪಂಚಮಹಾಭೂತದಲ್ಲಿ ೫ ಪಂಚಭೂತಗಳು ಮನಃ ಪುನಃ ಸಮಿಶ್ರಗೊಂಡು ಪಂಚೀಕರಣ ಹೊಂದುತ್ತಾ ಶರೀರದ ಇಂದ್ರಿಯಗಳು ಸೃಷ್ಟಿಯಾಗಿದೆ ಎಂದು ಚನ್ನ ಬಸವಣ್ಣ ನವರು ತಮ್ಮ ಕರಣ ಹಸಿಗೆಯಲ್ಲಿ ೨೫ ಇಂದ್ರಿಯಗಳ ಉತ್ಪತ್ತಿಯನ್ನು ತತ್ವ ಬದ್ಧವಾಗಿ ಹೇಳಿರುವರು ಇನ್ನು ಮುಂದೆ ಕರ್ಮೇಂದ್ರಿಯಗಳು ಅಥವಾ

ಜ್ಞಾನೇಂದ್ರಿಯಗಳ ಹಾಗೂ ಬುದ್ಧೀಂದ್ರಿಯಗಳನ್ನು ಕುರಿತು ಅವುಗಳ ಕಾರ್ಯಗಳನ್ನು ಒಳಗೊಂಡಿರುವ ವಿಷಯ ರೂಪ ಅಧಿದೇವತೆ ಕುರಿತು ತಮ್ಮ ಕರಣ ಹಸಿಗೆಯಲ್ಲಿ ಹೇಳಿರುವರು.

**ಬುದ್ಧೀಂದ್ರಿಯಗಳು :**

ಶ್ರೋತ್ರಂ ತ್ವಜ್ಞೇ ತ್ರಜಿಹ್ವಾಚ ಘ್ರಾಣಂ ಪಂಚೋಂದ್ರಿಯಣಿ ಟ
ಆಕಾಶೋ ವಾಯು ರಿಗ್ನಿ ಶ್ವಪಯಃ ಪೃಥ್ವಿ ಕ್ರವೇಣ ಚ।
೮೬ ಎಂಬುದರ ವಿವರ ಇಂತಿದೆ.

**ಬುದ್ಧಿ ಜ್ಞಾನೇಂದ್ರಿಯಗಳು**

ಶೋತ್ರ ತ್ವಕ್ಕು ನೇತ್ರ' ಜಿಹ್ವಾ ಪ್ರಾಣ

ಇವುಗಳ ಕಾರ್ಯ ಒಳಗೊಂಡ ವಿಷಯ ಮಹತ್ವವಾದರೂ ಏನು? ಎಂಬ ವಿವರವೇನೆಂದರೇ

**ಶ್ರೋತ್ರೇಂದಿಯ :-**

ಕಿವಿ ಕೇಳುವುದು ಇದರ ಕಾರ್ಯ ಆಕಾಶ ಮಹಾ ಭೂತವಾಗಿರುವುದು ಇದರ ಅದಿದೇವತೆ ಉತ್ತರ , ದಕ್ಷಿಣ, ಪೂರ್ವ, ಪಶ್ಚಿಮ, ಆಗ್ನೇಯ, ನೈಋತ್ಯ, ಈಶಾನ್ಯ, ವಾಯುವ್ಯ, ಆಕಾಶ, ಭೂಮಿಗಳೆಂಬ ದಶದಿಕ್ಕುಗಳಿವೆ ಇದು ಒಳಗೊಳ್ಳುವ ವಿಷಯ ಶಬ್ಧ ಧ್ವನಿ ನಾದ, ಇದು ಎರಡು ವಿಧದಲ್ಲಿ.

೧ ಅಕ್ಷರದ ಮೂಲಕವಿರುವ ಶಬ್ಧ ಧ್ವನ್ಜಿ, ಉದಾ: ಅ-೦-೦ ೨ ಅನಾಕ್ಷರ ಅಕ್ಷರವಿಲ್ಲ ಕೇವಲ ಧ್ವನಿ ಉದಾ: ಗುಡುಗು ಮಿಂಚು, ಕೇಕೇ, ಸಿಳ್ಳು, ಮುಂತಾದ ಧ್ವನಿ ಮಾತ್ರ ಧ್ವನಿಯಿಂದ ಕೇಳಿ ಅರಿತು ವ್ಯವಹರಿಸಲು ಅನೂಕೂಲವಾಗುವುದು ಜೀವಿಯ ಸರ್ವಕಾರ್ಯಕ್ಕು ಅವಶ್ಯವಾಗಿದೆ. ತ್ವಗಿಂದ್ರಿಯ ಚರ್ಮ ಸ್ಪರ್ಶಾನುಭವ ಇದರ ಕಾರ್ಯ ಮುಟ್ಟಿ ತಟ್ಟೆ ಅರಿಯುವುದು ಇದಕ್ಕೆ ವಾಯುವೇ ಮಹಭೂತವಾಗಿರುವುದು ಇದರ ಅದಿದೇವತೆ ಚಂದ್ರ ಇದು ಒಳಗೊಂಡಿರುವ ವಿಷಯ ಮುಟ್ಟಿ ತಟ್ಟೆ ಸ್ಪರ್ಷ ಸುಖ ಹೊಂದುವುದಾಗಿದೆ.

**ಸ್ಪರ್ಷ ಭೇದಗಳು**

ಶೇತ – ತಂಪಾಗಿರುವುದು

ಉಷ್ಣ – ಬಿಸಿಯಾಗಿರುವುದು

ಮೃದು – ಕೋಮಲವಾಗಿರುವುದು

ಕಠಿಣ – ಬಿರುಸಾಗಿರುವುದು

ಈ ನಾಲ್ಕು ವಿದಧಲ್ಲಿ ಸ್ಪರ್ಷ ಸುಖ– ಸಂದರ್ಭ ಸನ್ನಿವೇಶಕ್ಕೆ ತಕ್ಕಂತೆ ಗಮ್ಯವಾಗಿರುವುದು ಇದರಿಂದಲೇ ಸ್ತ್ರೀ ಪುರುಷ, ಸ್ನೇಹಾದಿ ಚುಂಬನ, ಆಲಿಂಗನ ಸುಖ ಪಡೆಯುವವರು ಇದು ಒಂದು ಹೆಸಿವಾಗಿದೆ. ಅಲೇ ಅವಶ್ಯವಾದದ್ದಾಗಿದೆ ಮನುಷ್ಯ ಜೀವಿಗೆ ಚರ್ಮ ಸುಖ ಪ್ರಕೃತಿ ತಿಳಿದಿರುವರು, ಚರ್ಮದ ನಿಗ್ರಹ ಮುಖ್ಯ ಸುಖದ ಪರಮಾನಂದ ನೋವಿನ ಭಾದೆ ಇದರಿಂದಲೇ ಬೆಳೆಯುವುದು.

**ನೇತ್ರೇಂದ್ರಿಯ :–**

ಕಣ್ಣು ನೋಡಿ ಅರಿಯುವುದು ಇದರ ಕಾರ್ಯವಾಗಿದೆ ಅಗ್ನಿಯೇ ಮಾಹಾಭೂತವಾಗಿದೆ. ಅದಿದೇವತೆ ಸೂರ್ಯ ದೇವನಾಗಿರುವನು ಚೈತನ್ಯವಾಗಿರುವುದು ಇದು ಒಳಗೊಂಡ ವಿಷಯವೆಲ್ಲವೂ ರೂಪ ಪಡೆದಿರುವುದು

**ರೂಪಗಳ ಭೇದ**

ಶ್ವೇತ – ಬಿಳಿ ಬಣ್ಣ

ವೇತ – ತಾಮ್ರ ಬಣ್ಣ

ಹಿರಿತ – ವಜ್ರಹೊಳೆಯವ ಬಣ್ಣ

ಮಾಂಜಿಷ – ಸುಂದರ ಮಧುಬಣ್ಣ

ಕಪೂತ – ಪಾರಿವಾಳದ ಬಣ್ಣ

ಕಲಷಣ – ಕಪ್ಪು ಬಣ್ಣ

ಗಳಿಂದ ಕೂಡಿರುವುದು ಈ ಇಂದ್ರಿಯಾ ಅತ್ಯಂತ ಮುಖ್ಯವಾದದ್ದು ಸರ್ವ ಕಾರ್ಯಗಳಿಗೆ ಅತೀ ಮುಖ್ಯವಾಗಿರುವುದು ಸೃಷ್ಠಿಯನ್ನು ನೋಡುವ ಭಾಗ್ಯವನ್ನು ಇದು ಮಾಡಿಕೊಡುವುದು.

**ಜಿಹ್ವೇಂದ್ರಿಯ :–**

ನಾಲಿಗೆ ನೆಕ್ಕಿ ರುಚಿನೋಡಿ ಅರಿಯುವುದು ಇದರ ಕಾರ್ಯ, ಅಪ್ಪು (ಜಲ) ವೇ ಮಹಭೂತವಾಗಿದೆ ಅದಿದೇವತೆ ವರುಣ ಇದು ಒಳಗೊಂಡ ವಿಷಯ ದ್ರವರೂಪ ರಸ ರುಚಿ ನೋಡಿ ನಿರ್ಧರಿಸುವುದಾಗಿದೆ.

**ರಸಭೇಧಗಳು**

ಮಧುರ – ಹೂವಿನ ರಸ ಕೋಮು

ಆಮ್ಲ – ಹುಳಿ

ತಿಕ್ತ – ಕಹಿ

ಕಟು – ಮಂದವಾಗಿರುವ

ಕಷಾಯ –ಔಷದೋಪಾದಿಯಲ್ಲಿರುವ

ಲವಣ – ತೇವ ಹಸಿಯಾಗಿರುವ ಜಲತಂಪು

ಜೀವಿಗಳು ಜೀವಂತವಾಗಿರಲು ಬಾಯಾರಿಕೆ ಇಂಗಿಸಲು ಬದುಕು ಹಸುರಾಗಿರಲು ಈ ಜಲರೂಪ ಜೀವೇಂದ್ರಿಯ ೬ ರೀತಿ ರಸಗಳು ಕಾರ್ಯನಿರ್ವಸುವುವು ಇದು ಅತಿ ಮುಖ್ಯವಾದದ್ದಾಗಿದೆ.

ಘ್ರಾಣೇಂದ್ರಿಯ:-

ಮಾಡಿ ವಾಸನೆ ನೋಡುವುದರಿಂದ ಅರಿಯುವದಾಗಿದೆ ಪೃಥ್ವಿ ಮಹಾಭೂತದ ಅದಿದೇವತೆ ಅಶ್ವಿನಿಯಾಗಿದೆ. ಇದು ಒಳಗೊಂಡ ವಿಷೆ ಗಂಧ ಭೂಮಿತನ್ನದೇ ಆದ ವಾಸನೇ ಹೊಂದಿದೆ. ಅಲ್ಲಿಂದಲೇ ಎಲ್ಲಾ ರೀತಿಯ ವಾಸ ನೇ ಹೊರಡುವುದು ಭೂಮಿಯಿಂದ ಹುಟ್ಟಿದ ಹೂ ವಾಸನೆಯ ಹಾಗೆ ಇದು ಗಂಧ ವಾಸನೆ ಹೊಂದಿರುವುದು.

**ಎರಡು ವಾಸನೆ ಬೇಧಗಳಿವೆ**

೧. ಸುಗಂಧ
೨. ದುರ್ಗಂಧ

ಈ ಎರಡು ವಾಸನಗಳು ಕೆಟ್ಟದ್ದು ಒಳ್ಳೆಯದ್ದು, ಎಂಬ ರೀತಿಯಲ್ಲಿ ಇವೆ ಇದರಿಂದ್ ಚೈತನ್ಯ ಮನಸ್ಸು ಸಾದಾನಂದ ಹೊಂದಲು ದುರ್ಗಂದದಿಂದ ಕಸಿವಿಸಿ ಹೀಗೆ ಎಲ್ಲಾ ವಾಸನೆಗಳ ಮೂಲವಾಗಿದೆ. ಅತಿ ಅವಾಶ್ಯವಾದ ಇಂದ್ರಿಯವಿದ್ದು ಹೀಗೆ ಪಂಚೇಂದ್ರಿಯಗಳ ಕೆಲಸ ಕಾರ್ಯ ವಿಷಯ ವಸ್ತು ಕುರಿತು ಅವು ಬದುಕಿಗೆ ಲವಲವಕೆಯಿಂದ ಹೀಗೆ ಬದುಕಲು ಸಾದಿಸಲು ಇವು ಅವಶ್ಯಕತೆವಾಗಿವೆ. ಮತ್ತು ಶಿವಲಿಂಗ ಪೂಜೆಯಲ್ಲಿ ನೋಡಿಸ್ಪರ್ಷಿಸಿ ಪುಷ್ಪಗಳಿಂದ ಗಂದೋಧತಗಳಿಂದ ನಾದದಿಂದ ಮಂತ್ರ ಹೋಮ್ಮಿಸಿ ಜಲ- ಹಾಲುಗಳಿಂದ ಅಭಿಷೇಕ ಮಾಡಿ ಪಂಚವಿಧವಾಗಿ ಪೂಜಿಸಿ ಸಾದಕ ನಾಗಲು ಅನುಕೂಲವಾಗಿವೆ ಎಂಬುದರ ಕುರಿತು ಚೆನ್ನ ಬಸವಣ್ಣನವರು ಹಸಿಗೆಯಾಗಿ ಹೇಳಿರುವರು.

**ಕರ್ಮೇಂದ್ರಿಯಗಳು**

**ವಾಕ್ (ಮಾತು) ಪಾಣಿ(ಕೈ) ಪಾದ ಪಾಯು ಗಹ್ಯ**

ಈ ಕರ್ಮೇಂದ್ರಿಯಗಳ ಕಾರ್ಯ ವಿವರ ಮಹತ್ವ ಹೀಗಿದೆ.

**ವಾಗೀಂದಿರ್ಯ :-**

ನಾಗವಾಯುವೇ ಚೈತನ್ಯ ರೂಪವಾಗಿ ನೆಲೆಗೊಂಡಿರುವುದು ಇದರ ಆತ್ಮನು ತಾನೆ ಸರಸ್ವತಿ ಎಂದು ಅದಿದೇವತೆ ಸರಸ್ವತಿ ಇದು ಒಳಗೊಂಡ ವಿಷಯವೇನೆಂದರೇ ಒಳ್ಳೆಯ ಮಾತುಗಳನ್ನು ಮತ್ತು ಕೆಟ್ಟ ಮಾತುಗಳನ್ನು ಆಡುವುದು ಉಚ್ಚರಿಸುವುದಾಗಿದೆ. ನಾಲಿಗೆ ಬೀಳುವವರಿಗೂ ಸಾವು ಅವರಿಸುವವರೆಗೂ ತನ್ನ ಕಾರ್ಯನಿರ್ವಹಿಸುವುದು.

**ಪಾಣೇಂದ್ರಿಯ (ಕೈಗಳು) :-**

ಕೂರ್ಮವಾಯು ಚೈತನ್ಯ ರೂಪವಾಗಿ ನೆಲೆಗೊಂಡಿರುವುದು ಆತ್ಮ ತಾನೆ ಇಂದ್ರನೆಂದು ಅಧಿದೇವತೆ ಇಂದ್ರನಾಗಿರುವನು ಇದು ಒಳಗೊಂಡ ವಿಷಯ ಆಧಾನ ಮತ್ತು ಪ್ರಧಾನ ಕೊಡುವ ತೆಗೆದುಕೊಳ್ಳುವ ಕಾರ್ಯ ಮಾಡುವುದು ಇದು ನಷ್ಟವಾಗಿ ಹೋಗಲು ತೋಳೆಂಬ ಬಂದವು ಬೀಳಾಬಿದ್ದಾಗ ಆಧಾನ ಪ್ರಧಾನ ಕ್ರಿಯಗಳಿಗೆ ಸುಸ್ಥಿರವಾಗಿ ಬರಲರಿಯರು ೯೦ ಅಂದರೆ ಜೀವಂತವಾಗಿರುವವರೆಗೂ ಸುಸ್ಥಿರವಾಗಿ ಬರಲರಿಯರು ಅಂದರೇ ಜೀವಂತವರೆಗೂ ಜೀವನ ನಿರ್ವಹಣೆಗೆ ಬದುಕಿಗೆ ಸಾಕಾರ ರೂಪವಾಗಿರುವುದು.

**ಪಾದೇಂದ್ರಿಯ (ಕಾಲುಗಳು) :-**

ಕೃತಕ ವಾಯುವೇ ಚೈತನ್ಯ ರೂಪವಾಗಿ ನೆಲೆಗೊಂಡಿರುವುದು ಆತ್ಮನು ತಾನು ವಿಷ್ಣುವೆಂದು ಅದಿದೇವತೆ ವಿಷ್ಣು ಆಗಿರುವನು ಇದು ಒಳಗೊಂಡ ವಿಷಯ ಗಮನಾಗಮನ ಶರೀರವನ್ನು ಹೊತ್ತುಕೊಂಡು ಸಂಚರಿಸುವ ಕಾರ್ಯಬೇಡುವುದು. ಯಾವುದಾದರೊಂದು ಕೊಡೆ ಹೋಹ ಬಾಹ ಎಂಬ ಹೆಡೆಯೂಟಕ್ಕೆ ಸುಸ್ತಿರವಾಗಿರುವುದು '೯೧ 'ಹೀಗೆ ಜೀವಂತವಾಗಿರುವ ವರೆಗೂ ಚಲನ – ವಲನ ಕ್ರಿಯೆಗೆ ಅಲೆ ಮುಖ್ಯವಾದದ್ದು.

**ಪಾಯ್ವಿಂದ್ರಿಯಾ (ಗುದ) :-**

ದೇವ ದತ್ತ ವಾಯುವೆ ಚೈತನ್ಯ ರೂಪವಾಗಿ ನೆಲೆಗೊಂಡಿರುವುದು ಆತ್ಮನು ತಾನೆ. ಅದಿದೇವತೆ ಮೃತ್ಯುವಾಗಿರುವುದು ಇದು ಒಳಗೊಂಡಿರುವ ವಿಷಯ ಸರ್ಜನ ವಿಸರ್ಜನ ಆರೋಗ್ಯವಾಗಿರಲು ಅಹಾರವನ್ನು ಸ್ವೀಕರಿಸಿದ ನಂತರ ಅದು ಜೀರ್ಣ ಕ್ರಿಯೆಗೆ ಒಳಪಟ್ಟು ದೇಹಕ್ಕೆ ಬೇಡವಾದದನಲ್ಲ ವಿಸರ್ಜಿಸುವ ಕ್ರಿಯ ನಡೆಸಿವುದು ಈ ವಿಸರ್ಜನೆ ಕ್ರಿಯೆ ನಡೆಯದೇ ಹೋದರೆ ಸಾವು ಖಂಡಿತ ಮಲ ಮೂತ್ರಗಳನ್ನು ಸಂಬಂಧಪಟ್ಟ ಕೋಶಗಳಲ್ಲಿ ಹಿಡಿದಿಟ್ಟು ಕೊಳ್ಳುವುದು ಸರ್ಜನವಾಗಿದೆ ಹೀಗೆ ಹಿಡಿದಿಟ್ಟುಕೊಂಡಿದ್ದನ್ನು ಗುದ್ದದ್ವಾರದ ಮೂಲಕ ಹೊರಗೆ ಕಳುಹಿಸುವುದು ವಿಸರ್ಜನ ಕ್ರಿಯಯಾಗಿದೆ. ಜೀವಿಯು ಜೀವಂತ ವಿರುವವರೆಗೂ ಈ ಕಾರ್ಯನಡೆಯುವುದು.

**ಗುಹ್ಯೇಂದ್ರಿಯ :-**

ಧನಂಜಯ ವಾಯುವೇ ಚೈತನ್ಯ ರೂಪವಾಗಿ ನೆಲೆಗೊಂಡಿರುವುದು ಆತ್ಮನು ತಾನೆ ಬ್ರಹ್ಮನೆಂದು ಅದಿದೇವತೆ ಬ್ರಹ್ಮನಾಗಿರುವನು. ಇದು ಒಳಗೊಂಡ ವಿಶೇಷ ಆನಂದ, ಅನಾನಂದ, ಸಂಸಾರ ಮಂದನಕ್ಕೆ ಸುಸ್ಥಿರವಾಗಿ ಬರುವುದು ಈ ಗುಹ್ಯೆವು ಗೋಪ್ಯವಾಗಿರದೆ ದಮಳ ಬದ್ಧವಾಗಿ ಸತಿ ಪತಿಗಳಾದವರು ಗುಹ್ಯದ ಮೂಲಕ ಸಾಮರಸ ಹೊಂದಿ ಅತ್ಯಾನಂದ ಪಡೆಯುತ್ತಾ ವೀರ್ಯಸ್ಖಲನ ೯೩ ಹೊಂದುವುದು

ಆನಂದವೆಂದರೆ ಇದರ ಮೂಲಕ ಮಾತ್ರ ವಿಸರ್ಜನೆ ಯಾಗುವುದು ಒಂದು ವೇಳೆ ಮೂತ್ರ ವಿಸರ್ಜನೇ ಆಗದೆ ಹೊದಲ್ಲಿ ತೊಂದರೆಯಾಗುವುದು ಇದು ಜೀವಿ ಜೀವಂತವಾಗಿರುವವರೆಗೂ ಕಾರ್ಯ ನಡೆಯುವುದು.

ಹೀಗೆ ಕರ್ಮೇಂದ್ರಿಯಗಳು ಸರಿಯಾಗಿ ತಮ್ಮ ಕೆಲಸವನ್ನು ಮಾಡುತ್ತಾ ಮನುಷ್ಯನ ಜೀವನವನ್ನು ಸರಳ ಸುಂದರಗೊಳಿಸುವುದರೊಂದಿಗೆ ಸುಖ ನೆಮ್ಮದಿ ಪ್ರಾಪ್ತವಾಗುವುದು ಇಂದ್ರಿಯಗಳು ಮನುಷ್ಯನು ಧರ್ಮ ಬದ್ಧವಾಗಿ ಉಪಯೋಗಿಸಿಕೊಂಡರೆ ಉತ್ತಮ ಕಾರ್ಯಗಳಿಗೆ ಬಳಿಸಿಕೊಂಡರೇ ಆತನಿಗೆ ಶ್ರೇಯಸ್ತು ದೊರೆಯುವುದು ಹೀಗೆ ಚನ್ನಬಸವಣ್ಣ ನವರು ಕರ್ಮೇಂದ್ರಿಯಗಳ ಬಗ್ಗೆ ಹೇಳಿರುವರು.

**ಪಿಂಡ ಸಂಗ್ರಹ :–**

- ಪಿಂಡ ಬ್ರಹ್ಮಾಂಡೆಯೋರೈಕ್ಯ
- ಸ್ಥೂಲ ಬ್ರಹ್ಮಾಂಡದೊಳಗುಳ್ಳ ಗುಣಗಳ ಶ್ರಮವು ಪಿಂಡದಲ್ಲಿ ಸೂಕ್ಷ್ಮ ರೂಪಗಳಿಂದ ಸಂಗ್ರಹಿಸರುವುದು.
- ಭೂತ ಪೆಂಚಕದೇಹಾನಾಂ
- ಪೆಂಚ ಮಹಾಭೂತಗಳ ಪಂಚಾಂಶಿಕಮಂ ಪಂಚೀಕೃತಿ ಯನ್ನೈ ದುತ್ತಿರಲು ದೇಹವಾಯಿತು.
- ಪೃಥ್ವಿ , ವಾಯು, ಅಪ್ಪು, ತೇಜ, ಆಕಾಶ
- ಪಂಚ ಮಹಾ ಭೂತಂಕಗಳು
- ಅಸ್ಥಿಯಾಂಸತ್ವಚೇ ನಾಡೀರೋದು ಚೈವತು ಪಂಚಕಂಕ್ಷಿ ತೋಃ ಪಂಚಗುಣಾಃ ಪ್ರೋ ಕ್ರಿಸ್ತದಾಂಶಾ: ಪರಿವರ್ತಿತಾ ॥
- ಅಸ್ಥಿ ಮಾಂಸ, ಚರ್ಮ, ನರ, ರೋಮ, ಇವ್ವೆದು ಪೃಥ್ವಿಯಿಂದಲಾದವು
- ಲಾಲಾ ಮಂತ್ರಂತಥಾ ಸ್ವೇದಃ ಶುಕ್ಲಂ ಶೋಣಿ ತವೇಮಚ । ಅಪಾಂ ಪಂಚಗುಣಾಃ ಪ್ರೋ ಕ್ರಾಸ್ತದಾಂಶಃ ಪರಿಶಿರ್ತಿತಾ॥
- ಶ್ಲೇಷ್ಮ ಮಾತ್ರ ಪಿತ್ಥ ಶುಕ್ಲ ರಕ್ತ ಅವೆವಿನಿಂದಿಲುವು
- ಕ್ಷುದ ತುಷ್ಣ ತೆಥಾ ನಿದ್ರಾ ಚಾಲಸ್ಯಂ ಸಂಗಏವಚ। ಅಗ್ನೇಃ ಪಂಚಗುಣಾ ಪ್ರಾತ್ತಾಸ್ತಾಂದಶಾ ಪರಿಕಿರ್ತಿಲೆನಾ ॥
- ಕ್ಷುದೆ ತೃಷ್ಣೆ ನಿದ್ರೆ ಆಲಸ್ಯ ಸಂಗ
- ಧವನಾಂವಲ್ಲ ದ್ಯೆಲು ಕುಂಚಾನಾಂ ಚಪ್ರಸರಣಂ। ವಿಯೋಗ ಶ್ವೇಲೆ ವಿಜ್ಞೇಯೋ ವಾಯೋಃ ಪಂಚಗುಗಾಸ್ಮತಾ॥
- ಪರಿವೆ ಪರುವ ಸುಲಿವು ಹೆಬ್ಬುವ ಅಗವಿವ ಐದು ವಾಯು
- ರಾಗ ದ್ವೇಷಭಯಾ ಲಜ್ಜಾ ಮೋಹ ಶ್ಚೈವ ಯಥಾ ತಥಾ । ನಭಃ ಪಂಚಗುಣಾಂ ಪ್ರೋಕ್ತಾಸ್ತದಂಶಾಃ ಪರಿರ್ತಿತ ॥

- ರಾಗ ದ್ವೇಷ  ಭಯ  ಬಜ್ಜ  ಮೋಹ ಈ ಐದು  ಆಕಾಶದಿಂದಲಾದವು  ಇಂತಿ ಪಂಚಮಹಭೂತಗಳ  ಪಂಚವಿಶುಲೆಗುಣಗಳು
- ವಿಭೇದಗಳು
- ಪೃಥ್ವಿಗೆ  ಇಪ್ಪತ್ತೈದು ಗುಣ, ಅಪ್ಪವಿಗೆ  ಇಪ್ಪತ್ತುಗುಣ।,  ಅಗ್ನಿಗೆ  ಅದಿನೈದುಗುಣ, ವಾಯುವಿಗೆ ಹತ್ತು ಗುಣ,  ಆಕಾರಕ್ಕೆ  ಐದುಗುಣ

**ದಶವಾಯುಗಳು:–**

ಪ್ರಣ, ಅಪಾನ, ವ್ಯಾನ, ಉದಾನ, ಸಮಾನ, ನಾಗ, ಕುರ್ಮ, ಕೃತಕ ದೇವ ದತ್ತ ಧನಂಜಯ ಇವಕ್ಕೆ ಸ್ಥಾನ ಧರ್ಮ, ಕರ್ಮ ವರ್ಣಗಳ ವಿವರ.

ಪ್ರಾಣವಾಯು ಇಂದ್ರನೀಲವರ್ಣ  ಹೃದಯ ಸ್ಥಾನದಲ್ಲಿ  ಅಂಗುಷಾ  ತೊಡಗಿ ಪ್ರಾಣಾಗ್ರಪರಿಯನಂತರ ಸಪ್ರಣಿಸಿಕೊಂಡು ಉಚ್ಚಾಸ ನಿಶ್ವಸನಂಗೈನೆ ಅನ್ನ ಜೀರ್ಣ ತರಣಃ ಮಾಡಿ ನೆಲೆದುದು.

ನಾಗವಾಯು :– ಪೀತ ವರ್ಣದ್ದಾಗಿರುತ್ತದೆ ರೋಮ ನಾಳದಲ್ಲಿದ್ದು ಚಲನೆ ಇಲ್ಲದೆ ಆಡಿಸುತ್ತದೆ

ಕರ್ಮವಾಯು :– ಇದು ಶ್ವೇತವರ್ಣದ ಹೆಣೆಯಲ್ಲಿರುತ್ತದೆ. ಪುಷ್ಠೀಕರಿಸಿಕೊಂಡು ಬಾಯಿಯನು ಮುಚ್ಚುವುದು ತೆರೆಯುವುದು ಮತ್ತು ನಯನ (ಕಣ್ಣಿನಲ್ಲಿ) ಉನ್ಮೀಲತೆಯನ್ನು ಮೂಡಿಸುತ್ತಿರುವುದು.

ಕೃತರ ವಾಯು :– ಅಂಜನವರ್ಣ ಮೂಗಿನಲ್ಲಿ ದಾಕ್ಷುದಾದಿ ಧರ್ಮಗಳನ್ನು ನೆಲೆಗೊಳಿಸಿವೆ. ಗಮ ನಾಗಮನಗಳನ್ನು (ಆಲಿಸು ವಾತೆ) ಮಾಡಿರುವುದು.

ದೇವದತ ವಾಯು:– ಸ್ಪಟಿಕ ವರ್ಣ ಗುಹ್ಯ ತಟಸ್ಥಾನದಲ್ಲಿ ಕುಳಿತಾಗ ಮಲಗಿಸಿ ಮಲಗಿದಾಗ ಏಳಿನೆ ನಿಲ್ಲನೆ ಚೇತೆಂನೆನೆ ಮಾತನಾಡಿಸುತ್ತಿರುವುದು.

ಧನಂಜಯ ವಾಯು :– ನಿಲವರ್ಣ ಬ್ರಹ್ಮ ರುದ್ರ ಸ್ಥಾನದಲ್ಲಿದ್ದು, ಕರ್ಣದಲ್ಲಿ ಸಮುದ್ರ ಘೋಷಣೆಯನ್ನು ಘೋಶಿಸಿ ಮರಣ ಕಾಲಕ್ಕೆ ನಿರ್ಘೋಷವಾಗುವುದು ಇವು ಐದು ನಾಗ ಪಂಚಕಗಳು ಈ ದಶವಾಯುಗಳು ಮನುಷ್ಯನ ದೇಹದಲ್ಲಿ ಕಾರ್ಯನಿರ್ವಹಿಸುತ್ತದೆ.

ನಿರೂಪಣ ಪ್ರಾರಂಭದಲ್ಲಿ ಪಾಲಿಸಿದ ಪ್ರಾಣಧಿ ೫ ವಾಯುಗಳು ಹೋದರೂ ದ್ವಿತಿಯಾದಲ್ಲಿ ನಿರೂಪಣ ಪಾಲಿಸಿದ ೫ ವಾಯುಗಳು ಹೋಗದೆ ನಾಗವಾಯು ಆತ್ಮವನ್ನು ಬಿಟ್ಟು ನಂತರ ಒಂದು ಗಳಿಗೆಯಲ್ಲಿ ಹೋಗುವುದು.

ಕೂರ್ಮವಾಯು : ಎರಡುಗಳಿಗೆ ನಂತರ ಹೋಗುವುದು

ಕೃತಕ ವಾಯು : ಮೂರುಗಳಿಗೆ ನಂತರ ಹೋಗುವುದು

ದೇವದತ್ತವಾಯು : ನಾಲ್ಕುಗಳಿಗೆಯ ನಂತರ ಹೋಗುವುದು

ಧನಂಜಯ ವಾಯು :- ಇದು ತಾನು ನಿಕ್ಷೇಪಿಸುವ ದೇಹವಿದ್ದರೆ ಆದೇಹವನ್ನು ಉಳಿಸಿ ಬಾಯಿಗೆ ಊದಿನೆ, ಒಡೆನೆ,ಮಣ್ಣಿನಲ್ಲಿ ಬೆರತು ಹೋಗುವುದು ಭೌತಿಕಾಗ್ನಿಯಲ್ಲಿ ದಹಿಸಿ ಹೋಗುವಂತಹ ಶರೀರವಿದ್ದರೆ ಸರ್ವಾಂಗವಲ್ಲ ಸುಟ್ಟು ನಂತರ ತಲೆಯು ಪಟ್ ಎಂದು ಒಡೆದು ಮಹವಾಯುವಿನೊಂದಿಗೆ ಹೋಗುವುದು.

ವ್ಯಾಖ್ಯಾನ ವಿವರ :

ಈಗಿನ ವಿಜ್ಞಾನಿಗಳು ಹೇಳುವ ಅಮ್ಲ ಜನಕ ಮತ್ತು ಇಂಗಾಲದ ಡೈ ಆಕ್ಸೈಡನ್ನು ಚನ್ನಬಸವಣ್ಣ ನವರು ದೇಹದಲ್ಲಿರುವ ಪ್ರಾಣ ಪಂಚಕ ಹಾಗೂ ನಾಗಪಂಚಕಗಳು ಈ ಹತ್ತು ವಾಯುಗಳು ದೇಹದಲ್ಲಿ ಇರುವ ಸ್ಥಳ ಅವುಗಳ ಬಣ್ಣ ಮತ್ತು ಕಾರ್ಯಗಳನ್ನು ಈ ರೀತಿಯಾಗಿ ಹೇಳಿರುವರು.

(೧) ಪ್ರಾಣವಾಯು :- ಇಂದ್ರನೀಲ ಕೆಂಪು, ನೀಲ, ಹಸಿರು, ಬಣ್ಣ ಹೊಂದಿದ್ದು, ಇದು ಹೃದಯ ಸ್ಥಾನದಲ್ಲಿರುತ್ತದೆ.
ಕಾರ್ಯ:- ಹೆಬ್ಬರಳಿನ ತುದಿಯಿಂದ ಹಿಡಿದು ಮೂಗಿನ ತುದಿಯವರೆಗೂ ಸಂಪೂರ್ಣವಾಗಿ ಸದಾ ಉತ್ಸಾಹ ಉಂಟು ಮಾಡುವುದು ಹದಿನಾರು ಅಂಗುಲದಷ್ಟು ವಾಯುವನ್ನು ಹೊರಗೆ ಹಾಕುವುದು ಹನ್ನೆರಡಂಗುಲದಷ್ಟು ವಾಯುವನ್ನು ಒಳಗೆ ತೆಗೆದುಕೊಳ್ಳುವುದು ಹೀಗೆ ನಿರಂತರ ಉಸಿರಾಟ ನಡೆಯುವಂತೆ ಮಾಡುವುದು ಇದರಿಂದ ಚೆನ್ನಾಗಿ ಜೀರ್ಣವಾಗಿ ಅದು ರಸವಾಗಿ ರಕ್ತವಾಗಲು ಸಹಾಯವಾಗುವುವುದು.

೨) ಅಪಾನ ವಾಯು: ಹಸಿರು ಬಣ್ಣದು < ಪಚ್ಚೆ ಹರಳಿನ ಕಾಂತಿ ಹೊಂದಿದೆ

ಕಾರ್ಯ: ಗುದಸ್ಥಾನದಲ್ಲಿದ್ದುಕೊಂಡು ದೇಹದಿಂದ ಮಲ ಮೂತ್ರವನ್ನು ಸರಾಗವಾಗಿ ವಿಸರ್ಜನೆಯಾಗಿಸುತ್ತದೆ. ಮಲಮೂರ್ತ ಹೊರಹಾಕಿದ ನಂತರ ಅದೇ ದ್ವಾರವನ್ನು ಮತ್ತೊಮ್ಮೆ ವಿಸರ್ಜನೆಯಾಗುವವರೆಗೂ ಭದ್ರಗೊಳಿಸಿ ಬಂದಾಗಿರುವುದು. ಇದರಿಂದ ತಿಂದ ಆಹಾರ ಸರಿಯಾಗಿ ಪಚನವಾಗಿ ರಸ ಮೈಗೆಲ್ಲ ಆವರಿಸಿ ಶಕ್ತಿ ಹೆಚ್ಚಾಗಲು ಅನುಕೂಲವಾಗುವುದು.

(೩) ವ್ಯಾನವಾಯು: ಗೋಕ್ಷಿರ ಬಣ್ಣ> ಹಸುವಿನ ಹಾಲಿನ ಕಂತಿಯನ್ನು ಹೊಂದಿದೆ.

ಕಾರ್ಯ: ದೇಹದ ಎಲ್ಲ ಭಾಗಗಳಿಗೂ ಹರಡುತ್ತದೆ. ಕೈಕಾಲು ಬೆರಳು ಗೋಣನ್ನು ದೀರ್ಘವಾಗಿ ಚಾಚಲು ಮತ್ತು ಮಡಚಲು ಹಾಗೂ ಎಲ್ಲ ಸಂಧಿ ಸ್ಥಾನಕ್ಕೂ ಶಕ್ತಿಯನ್ನು ನೀಡುವುದು.

(೪) ಉದಾನವಾಯು: ಕುಡಿ (ಎಳೆ) ಮಿಂಚಿನ ಬಣ್ಣದ್ದು > ಮಿಂಚಿನ ಕಾಂತಿಯನ್ನು ಹೊಂದಿದೆ.

ಕಾರ್ಯ: (ಕಂಠ) ಕುತ್ತಿಗೆ ಸ್ಥಾನದಲ್ಲಿರುವುದು: ಇದು ದುಃಖ ಬಂದಾಗ ಅಳಿಸುವುದು (ರೋಧಿಸುವುದು) ಸೇವಿಸಿದ ಆಹಾರದ ರಸವನ್ನು ದೇಹದಲ್ಲಿ ಎಲ್ಲ ಭಾಗಕ್ಕೂ ಸಾಗಿಸುವುದು. ಸೀನುವುದು, ಕೆಮ್ಮುವುದು, ಕನಸು ಕಾಣುವುದು, ತಿಂದ ಆಹಾರ ಜೀರ್ಣವಾಗದೇ ಇದ್ದರೆ ವಾಂತಿ ಮಾಡಿಸುವುದು ಹೀಗೆ ಶರೀರ ಸರಳವಾಗಿ ತನ್ನ ಕಾರ್ಯ ನಿರ್ವಹಿಸುವಂತೆ ಸಹಾಯ ಮಾಡುತ್ತದೆ.

(೫) ಸಮಾನವಾಯು: ನೀಲಬಣ್ಣವನ್ನು ಹೊಂದಿದ್ದು, ನೀಲಕಾಂತಿಯುಕ್ತವಾಗಿದೆ.

ಕಾರ್ಯ: ಹೊಕ್ಕಳ (ನಾಭಿಯ) ನಲ್ಲಿರುತ್ತದೆ. ಇದು ಬಾಗಿದಾಗ, ನಡೆಯುವಾಗ, ಬೀಳದಂತೆ ನೋಡಿಕೊಳ್ಳುತ್ತಿದೆ. ಸೇವಿಸಿದ ಅನ್ನದ ರಸವನ್ನು ಎಲ್ಲವನ್ನು ರೋಮ (ಕೂದಲು) ರಂಧ್ರಗಳಿಗೆ ಹರಿಸುವುದು ಪಾದದಿಂದ ಹಿಡಿದು ತಲೆಯವರೆಗೂ ಸಮತೋಲನಗಳನ್ನು ಕಾಪಾಡುವುದು.

ಈ ಐದು ಪ್ರಾಣ ಪಂಚಕಗಳು ಶರೀರದಲ್ಲಿ ಕಾರ್ಯ ನಿರ್ವಹಿಸುವುದು. ಇದು ಶರೀರ ಸೃಷ್ಟಿಯಾದಾಗ ಆತ್ಮದ ಜೊತೆಗೆ ಹುಟ್ಟಿಕೊಂಡು ಕೊನೆಗೆ ಮರಣಾಂತರ ಆತ್ಮವು ದೇಹವನ್ನು ತ್ಯಜಿಸಿದಾಗ ಆತ್ಮದ ಜೊತೆ ಈ ಪ್ರಾಣ ಪಂಚಕಗಳು ಹೋಗುತ್ತವೆ. ಇವು ಇಲ್ಲದೆ ಹೋದಲ್ಲಿ ದೇಹ ಸ್ಥಗಿತವಾಗಿರುವುದು ಮತ್ತು ಜಡತ್ವವಾಗಿಯೇ ಉಳಿದು ಬಿಡುತ್ತದೆ. ಪ್ರಾಣ ಪಂಚಕಗಳು ಅತಿ ಮುಖ್ಯ ವಾಯುಗಳೆಂದರೆ ನಾಗಪಂಚಕಗಳು ಉಪವಾಯುಗಳಾಗಿವೆ. ಇವುಗಳ ಕಾರ್ಯ ಚಟುವಟಿಕೆಗಳು ಈ ರೀತಿಯಾಗಿವೆ.

**ಕರಣ ಚತುಷ್ಟಯ:**

ಅವುಗಳ ಉತ್ಪತ್ಯ ತದ್ಭೂತ ಅಧಿದೇವತೆ ಸುಕರ್ಮಂಗಗಳು ಎಂತೆಂದಡೆ ಆತ್ಮನು ಆಕಾಶವೆಂಬ ಮಹಾಭೂತವ ಬೆರೆಸಿದಡೆ ಜ್ಞಾನ ಪುಟ್ಟಿತು. ಆತ್ಮನು ವಾಯುವೆಂಬ ಮಹಾಭೂತವ ಬೆರೆಸಿದಡೆ ಮನಸ್ಸು ಪುಟ್ಟತ್ತು. ಆತ್ಮನು ಅಗ್ನಿಯೆಂಬ ಮಹಾಭೂತದ ಬೆರೆಸಿದಡೆ. ಅಹಂಕಾರ ಪುಟ್ಟಿತು. ಆತ್ಮನು ಅಪ್ಪೂವೆಂಬ ಮಹಾಭೂತದ ಬೆರೆಸಿದಡೆ ಬುದ್ಧಿ ಪುಟ್ಟಿತು. ಆತ್ಮನು ಪೃಥ್ವಿಯೆಂಬ ಮಹಾಭೂತದ ಬರೆಸಿದಡೆ ಚಿತ್ತು ಪುಟ್ಟಿತು ಇಂತು ಮನೆ, ಅಹಂಕಾರ ಬುದ್ಧಿ ಚಿತ್ತು ಎಂಬುವು ಕರಣಚತುಷ್ಟಯಂಗಳ ಇವಕ್ಕೆ ವಿವರ:

ಮನಸ್ಸಿಂಗೆ ವಾಯುವೆಂಬ ಮಹಾಭೂತಃ ಚಂದ್ರನಧಿದೇವತೆ ಅಲ್ಲಿ ಸಂಕಲ್ಪ ವಿಕಲ್ಪಮಂ ಮಾಡಿಸುತ್ತಿಹುದು. ಅಹಂಕಾರಕ್ಕೆ ಅಗ್ನಿಯೆಂಬ ಮಹಾಭೂತ ರುದ್ರನದಿದೇವತೆ ಅಲ್ಲಿ ಅಹಂಭಾವದಿಂದ ಅಹಂಕರಿಸುತ್ತಿಹುದು. ಬುದ್ಧಿಗೆ ಅಪ್ಪವೆಂಬಮಹಾಬೂತಃ ವಿಷ್ಣವಧಿದೇವತೆ ಅಲ್ಲಿ ಬುದ್ದಿ ನಿಶ್ಚಯಿಸುತ್ತಿಹುದು. ಚಿತ್ತಕ್ಕೆ ಪೃಥ್ವಿಯೆಂಬ ಮಹಾಭೂತ ಬ್ರಹ್ಮನದಿದೇವತೆ ಅಲ್ಲಿ ಸ್ಥಿರದಿಂದ ಅವಧರಿಸಿ ಆನಂದಿಸುತ್ತಿಹುದು ಇಂತಿವೂ ಕರಣ ಚತುಷ್ಟಯ.

(೧೦) ಆತ್ಮ ಭೂತ ಪಂಚಕ ವಾಯುಪಂಚಕ ಇಂದ್ರಿಯದಶಕ ಕರಣಚತುಷ್ಟ ಯಂಗಳೆನಿಪ ಚತುರ್ವಿಂಶತಿತತ್ತ್ವ ವಹಂತಹದೀಗ ದೇಹ ಪಂಚಮೀಂಶತಿ ತತ್ತ್ವ ವಹಂತಹ ಆತ್ಮನು ದೇಹ ಆ ಆತ್ಮಂಗೆ ಜ್ಞಾನೇಂದ್ರಿಯವೇ ಚಿತ್ಸ್ವ ರೂಪ ಪರಶಿವನದಿ ದೇವತೆ ಸರ್ವಾತ್ಮರಲ್ಲಿಯಾ ಚೈತನ್ಯ ಸ್ವರೂಪನಾಗಿ ತೊಳಗಿ ಬೆಳಗುತ್ತಿಹನು ಇಂತಿದೂ ದೇಹಿ ದೇಹ ದೇಹಶಂಗಳ ವಿವರ

(೧೧) ಆತ್ಮ: ಭೂತ ಪಂಚಕ ವಾಯು ಪಂಚಕ ಇಂದ್ರಿಯ ದಶಕ ಕರಣ ಚತುಷ್ಕ ನಳಿಪ ಚತುರ್ವಿ ಶಾಲೆ ವಹಾತದೀಗ ದೇಹ ಪಂಚರ್ವಿಶಂತತಿ ತತ್ವ ವಂತಹ ಆತ್ಮನು ದೇಹಿ ಆ ಆತ್ಮಂಗೆ ಜ್ಞಾನೆಂದ್ರಿಯದೇ ಚಿತ್ಸ್ವ ರೂಪವು ವಾಗಾದಿ ಕ್ರಮೇಂಗಳೆತಿದು ಆದಿಶಕ್ತಿ ಸ್ವರೂಪನಾಗಿ ತೊಳಗಿ ಬೆಳಗುತಿಹನು ಇಂತಿಂದು ದೇಹಿ ದೇಹಕಗಳ ವಿವರ.

(೧೨) ಪಂಚ ವಿಶಲೆ ತತ್ವಗಳು: ಮನಸದಿ ಕರಣಂಗಳೆದು ಪರಶಕ್ತಿಸ್ವರೂಪ ಭೂಮ್ಯಾಟಿ ಭೂತ ಪಂಚಕವು ಇಚ್ಚಾಶಕ್ತಿ ಸ್ವರೂಪವು ಶ್ರೋತಾದ್ರಿ ಜ್ಞಾನೇಂದ್ರಿಯಗಳೆಂದು ಜ್ಞಾನ ಶಕ್ತಿ ಸ್ವರೂಪವು ವಾಗಾದ್ರಿಯಂಗ ಲೈದು ಕ್ರಿಯಾಶಕ್ತಿ ಸ್ವರೂಪವು ಇಂತಿವು ಪಂಚಶಕ್ತಿ ಸ್ವರೂಪಗಳಂತಹ ತತ್ವಂಗಳು ಆತ್ಮವು ಸೇರಿ ಪಂಚ ವಿಶಂತಿ ತತ್ವಂಗಳು.

(೧೩) ದಶನಾಡಿಗಳು: ಇಡ ಚಾ ಪಿಂಗಾಲಾ ಚೈವ ಸುಷುಮ್ನಾ ಚತೃತಿಯಾರೆ॥ ಗಾಂಧಾರಿ ಹಸ್ತಿ ಜಿಹ್ವಾ ಪೋಷಾ ಚೈವ ಪಯಸ್ವಿನಿ ಅಲಿಂಬೂ ಲಕೋನಾ ಚೈವ ಶಂಕಿನಿ ದಶನಾಡಿಕ॥

ಇಡಾ ಚಂದ್ರನಾಳ: ಐಂಗಾಳ ಸೂರ್ಯನಾಳ: ಸುಷುಮ್ಯಾ ಮಧ್ಯನಾಳ: ಗಾಂಧಾರಿ ಬುನೇತ: ಹಸ್ತಿ ಜಿಹ್ವಾ ವಿಡೆನೇತ್ರಾ: ಪೂಷ ಬಲದ ಕರ್ಣ ಪೆಯಸ್ವಿನಿ ಉಡದ ಕರ್ಣ: ಅಲಂಬು ಮೇಡ್ರನಾಳ: ಲಕಹು ಗುದನಾಳ: ಶಂಖಿನಿ ನಾಬಿನಾಳ: ಇಂತಿವು ದಶನಾಡಿಗಳು ಇವಕ್ಕೆ ಅಧಿದೇವತೆಗಳು.

ಇಡೆಗೆ ಹರಿಯಾದಿದೇವತೆ: ತಿಂಗಳಿಗೆ ಬ್ರಹ್ಮನದಿದೇವತೆ ಸುಷುಮ್ನೆಗೆ ರುದ್ರನದಿ ದೇವತೆ: ಗಾಂಧಾರಿಗೆ ಇಂದ್ರನದಿದೇವತೆ ಹೆಸ್ತಿಜಿಹ್ವೆಗೆ ವರುಣನದಿದೇವತೆ: ಪುಷೆಗೆ ಧಿಗ್ವೆವತೆಯುಧಿದೇವತೆ ಯಶಸ್ಸಿಗೆ ಪದ್ಮೆದ್ಭವನದಿದೇವತೆ: ಲಕು ಹಗೆ ಭೂಮಿನೆದಿದೇವತೆ ಅಲಂಬುವಿಗೆ ಸೂರ್ಯನದಿದೇವತೆ; ಶರಣನಿಗೆ ಚಂದ್ರನಧಿದೇವತೆ ಇಂತಿಹು ದಶನಾಡಿಯ ನದಿದೇವತೆಗಳು

**ಅಷ್ಟಾತ್ಮಂಗಳು:**

ಜೀವಾತ್ಮ, ಅಂತರಾತ್ಮ, ಪರಮಾತ್ಮ, ನಿರ್ಮಲಾತ್ಮ, ಶುದ್ಧಾತ್ಮ, ಜ್ಞಾನಾತ್ಮ, ಮಹಾತ್ಮ, ಭೂತಾತ್ಮ ಇಂತಿವು ಅಷ್ಟಾತ್ಮಾಂಗಳು.

**ಇವಕ್ಕೆ ವಿವರ:**

ದೇಹಭಾವದ ವ್ಯವಹಾರದಿಂದ ತನ್ನ ತಾ ಮರೆದಿರುವಾತ್ಮನೇ ಜೀವಾತ್ಮನು ಆದೇಹದ ಜಡತ್ವ ಮಂಕಂಡು ತಾನಾ ರೋ ಎಂದು ಚಿಂತಿಸುವಾತ್ಮನೇ ಅಂತರಾತ್ಮನು. ತನ್ನ ತತ್ವವನ್ನುಂಟು ಪರತತ್ವದಲ್ಲಿ ಪರಮಾಕಾಷ್ಠಿಯನ್ನೈದಿರುವಾತ್ಮನೆ ಪರಮಾತ್ಮನು ಅಣವಾದಿ ಮಲತ್ರಯಂಗಳ ವ್ಯವಹಾರಂಗಳಿಗೆ ದುರಸ್ಥನಾಗಿರುವಾತ್ಮನೆ ನಿರ್ಮಲಾತ್ಮನು

ಶುದ್ದಂತಃ ಕರಣದೇಹಿಯೆಂದು ಅಂತಃ ಶುಚಿಬಹಿಃ ಶುಚಿಯಾಗಿಪ್ಪಾತ್ಮನೆ ಶುದ್ಧಾತ್ಮನು
ಸದಾ ನಿತ್ಯಾನಿತ್ಯ ವಿವೇಕ ವಿಚಾರ ಪೂಂಬಂಕೆಯೊಡನೆ ಕೂಡಿರುವಾತ್ಮನೆ ಜ್ಞಾನಾತ್ಮನು
ಮಹಿಮಸ್ಪದನಾಗಿ ಮೆರೆವಾತ್ಮನೆ ಮಹಾತ್ಮನು
ಸಕಲ ಪ್ರಾಣಿಗಳಿಗೆ ಚೈತನ್ಯ ಸ್ವರೂಪವಾಗಿರುವಾತ್ಮನೆ ಭೂತಾತ್ಮನು

ಒಬ್ಬಾತ್ಮನೆ ಆಯಾಯಾ ವ್ಯವಹಾರದ ಭೇದದಿಂದ ಎಂಟು ಪ್ರಕಾರವದ ಆತ್ಮರುಗಳ ವಿಚಾರವಿದು. ಇಂತಿದು ಅಷ್ಟಾತ್ರ್ಮಂಗಳ ವಿವರ

**ಅಷ್ಟತನುಗಳು :**

ಸ್ಥೂಲತನು ಸೂಕ್ಷ್ಮತನು ತಾರಣತನು ನಿರ್ಮಲತನು ಆನಂದತನು, ಚಿನ್ಮಯತನು, ಚಿದ್ರೂಪತನು, ಶುದ್ಧನು ಇಂತಿಹು ಅಷ್ಟತನುಗಳು.

ಇವಕ್ಕೆ ವಿವರ : ಪೃಥ್ವಿ ಅಪ್ಪುಗಳೆಂಬೆರಡು ತತ್ವಂಗಳಿಂದ ವ್ಯಕ್ತೀಪರವಾದುದೆ ಸ್ಥೂಲತನು. ಅಗ್ನಿವಾಯುಗಳೆಂಬೆರಡು ತತ್ವಂಗಳಿಂದ ವ್ಯಕ್ತೀಕತರವಾದುದೆ ಸೂಕ್ಷ್ಮತ್ಮನು ಆಕಾಶ ಹೆಮ್ಮತಗಳೆಂಬೆರಡು ತತ್ತ್ವಂಗಳಿಂದ ವ್ಯಕ್ತೀಕರಣವಾದುದೆ ಕಾರಣಾತನು ನಿರ್ಮ್ಲಂ ಕರ್ಮ ಉಚ್ಛತೆ ಎಂದು ಹೇಳುತಿಹುದಾದ ಕಾರಣ ಪಂಚಕರ್ಮೇಂದ್ರಿಯಂಗಳೊಂದಾದುದೆ ನಿರ್ಮಲತನು.

# ಅಡಿ ಟಿಪ್ಪಣಿ

## ಕರಣ ಹಸಿಗೆಯ ವಸ್ತು ವಿಷಯ

೧) ಶ್ರೀ ಚೆನ್ನಬಸವಣ್ಣನವರ ಕರಣ ಹಸಿಗೆಯ ಸಂಪಾದಕರಾದ ಡಾ. ಶ್ರೀ ಇಮ್ಮಡಿ ಶಿವಬಸವ ಸ್ವಾಮಿಗಳ ಕೃತಿಯ ಸಂಪುಟ ೧೩ ರಿಂದ ೨೬ನೇ ಪುಟದವರೆಗೆ ತೆಗೆದುಕೊಂಡಿದೆ. ೨೦೦೧.

೨) ಡಾ. ಹೆಚ್. ತಿಪ್ಪೇರುದ್ರಸ್ವಾಮಿ, ಕರ್ನಾಟಕ ಸಂಸ್ಕೃತಿ ಸಮೀಕ್ಷೆ ಪುಟ ೭೬೫, ಡಿ.ವಿ.ಕೆ. ಪ್ರಕಾಶನ, ಮೈಸೂರು, ಮು–೨೦೦೭

೩) ಡಾ. ಬಿ.ವಿ. ಶಿರೂರ ಸಂ. ಡಾ. ಶ್ರೀ ಜ.ಚ.ನಿ. ಗೌರವ ಉದ್ಧರಣೆ ಸಾಹಿತ್ಯ (ಲೇಖನ) ಪುಟ ೧೫೩ ವೀರಶೈವ ಅಧ್ಯಯನ ಸಂಸ್ಥೆ, ಜಗದ್ಗುರು ತೋಂಟಾದಾರ್ಯ ಸಂಸ್ಥಾನ ಮಠ, ಗದಗ. ಮು–೧೯೮೬.

೪) ವೀರಶೈವ ಲಘು ಸಾಹಿತ್ಯ ಪ್ರಕಾರಗಳು ಈ ಅಪ್ರಕಟಿತ ಕೃತಿಯಿಂದ ಪುಟ ೧೬೨ ರಿಂದ ೧೬೬ರ ವರೆಗೆ ತೆಗೆದುಕೊಂಡಿದೆ. ಸಂಶೋಧಕರಾದ ಶ್ರೀ ಆರ್.ವ್ಹಿ. ಪಾಟೀಲರವರಿಂದ ಕನ್ನಡ ವಿಷಯದಲ್ಲಿ ಪಿ.ಹೆಚ್.ಡಿ. ಪದವಿಗಾಗಿ ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ ಸಂಶೋಧನ ಮಹಾಪ್ರಬಂಧ.

೫) ಡಾ. ಫ.ಗು.ಹಳಕಟ್ಟಿ ಸಂ : ವಚನಶಾಸ್ತ್ರದ ಭಾಗ–೨, ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟಾದಾರ್ಯ ಸಂಸ್ಥಾನ ಮಠ, ಮುದ್ರಣ ತೃತೀಯ ಆವೃತ್ತಿ, ಡಂಬಳ, ಗದಗ, ೧೯೮೨.

೬) ಡಾ. ಆರ್.ಸಿ. ಹಿರೇಮಠ ಸಂ. ಷಟುಸ್ಥಲ ಜ್ಞಾನ ಸಾರಾಮೃತ, ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟಾದಾರ್ಯ ಸಂಸ್ಥಾನ ಮಠ, ಗದಗ, ೧೯೮೩.

೭) ಅಕ್ಕ ಅನ್ನಪೂರ್ಣ ಸಂಪಾದಿಸಿರುವ ಲಿಂಗಾಯಿತಿ ಧರ್ಮಗ್ರಂಥ ಬಸವ ಸೇವಾ ಪ್ರತಿಷ್ಠಾನ ಬಸವಗಿರಿ ಬೀದರ್, ಪುಟ ಸಂಖ್ಯೆ ೨೬೬ ರಿಂದ ೩೦೨ರ ವರೆಗೆ ತೆಗೆದುಕೊಂಡಿದೆ. ಇಸವಿ ೨೦೧೩.

# ಅಧ್ಯಾಯ-೫

# ಕರಣ ಹಸಿಗೆಯ ದೇಹ ರಚನಾ ಶಾಸ್ತ್ರ

೧.೧. ಕರಣ ಹಸಿಗೆ

೧.೨. ಕರಣ ಹಸಿಗೆಯ ದೇಹ ರಚನಾ ಶಾಸ್ತ್ರ

## ೫. ಕರಣ ಹಸಿಗೆಯ ದೇಹ ರಚನಾ ಶಾಸ್ತ್ರ

ಜೀವಾತ್ಮ ಅಂಕುರವಾಗಬೇಕಾದರೆ ಎದೆಯ ಮಗ್ಗರಳ ಮಧು ದ್ರವಿಸಬೇಕು ಭಾವನೆಗಳು. ಆಗ ಜಗತ್ತಿನ ಈ ಉದಯದೊಂದಿಗೆ ಜೀವಾತ್ಮಗಳು ಪ್ರಾರಂಭಿಸುತ್ತವೆ. ಆ ಜೀವಿಗಳು ವಿಕಾಸಗೊಳ್ಳುತ್ತಾ ಇಡೀ ಭೂಮಂಡಲವನ್ನು ಅವಲೋಕಿಸುವ ಅನುಭವಿಸುವ ನಿಟ್ಟಿನಲ್ಲಿ ಕಾರ್ಯಪ್ರವೃತ್ತಿಯಾಗಿ ಅರಿವಿನ ಅಂಶವನ್ನು ತಲುಪಿದ ಜೀವಿಯೇ ಮಾನವ ಈ ಪ್ರಪಂಚದಲ್ಲಿಯೇ ಅತ್ಯಂತ ಶ್ರೇಷ್ಟ ಜಗತ್ತೆಂದು ಎಲ್ಲಾ ಜೀವರಾಶಿಗಳಗೂ ಅರ್ಥವಾಗುವ ರೀತಿಯಲ್ಲಿ ಎಲ್ಲಾ ಕಾರ್ಯ ವೈಖರಿಕೆಗಳಲ್ಲವು ರಹಸ್ಯವಾಗಿಯೇ ನಿಗೂಢತೆಯಲ್ಲಿ ಪ್ರಾರಂಭ ಹಾಗೂ ಕೊನೆಗಳ್ಳುತ್ತ ನಡೆದು ಹೋಗುತ್ತವೆ. ಈ ಭೂಮಿಯ ಸಕಲ ಚರಾಚರಗಳು ಹುಟ್ಟು ಹೇಗಾಗಿತ್ತು? ಅವು ಹೊಂದಿದ ಬೆಳವಣಿಗೆಯ ಹಂತಗಳು ಯಾವುವು? ಹಾಗೆ ಬೆಳವಣಿಗೆಗೆ ಪೂರಕವಾದ ಅಥವಾ ಕಾರಣವಾದ ಶಕ್ತಿ ಯಾವುವು? ಎಂಬ ಜಿಜ್ಞಾಸೆಯೊಂದಿಗೆ ತಿಳಿಯಲು ಈ ರೀತಿಯ ನಿಲವು ವ್ಯಕ್ತವಾಗುತ್ತವೆ.

ಇನ್ನು ಸ್ತ್ರೀಯರುಗಳಿಂದ ಜನನವಾದ ಶಿಶುಗಳ ಬೇದವಂ ಪೇಳ್ವೆ ಆದೆಂತಂದಡೆ.

ಸ್ತ್ರೀಗೆ ರಜಸ್ವಲೆಯಾದ ತ್ರಿವಿಧದಿನಕ್ಕೆ<br>
ಗರ್ಭವಾಗಿ ಹುಟ್ಟಿದ ಮಗನು ಚೋರನಾಹನು,<br>
ಚತುರ್ಥದಿನಕ್ಕೆ ಪಾಪಿಯಹನು, ಪಂಚದಿನಕ್ಕೆ ಬುದ್ಧಿವಂತನಹನು<br>
ಷಷ್ಠಿದಿನಕ್ಕೆ ವ್ರತಗೇಡಿಯಹನು, ಸಪ್ತದಿನಕ್ಕೆ ದಯಾಪರನಹನು,<br>
ಅಷ್ಟಮದಿನಕ್ಕೆ ದರಿದ್ರನಹನು,ನವಮದಿನಕ್ಕೆ ಧನಿಕನಹನು,<br>
ದಶದಿನಕ್ಕೆ ಕಾಮಿಯಹನು, ಏಕಾದಶದಿನಕ್ಕೆ ವ್ಯಾದಿಪೀಡಿತನಹನು<br>
ದ್ವಾದಶ ದಿನಕ್ಕೆ ಪಂಡಿತನಹನು , ತ್ರಯೋದಶದಿನಕ್ಕೆ ವಿವೇಕಿಯಹನು<br>
ಚತುದರ್ಶದಿನಕ್ಕೆ ಭೋಗಿಯಹನು, ಪಂಚಾದಶದಿನಕ್ಕೆ ರಾಜನಹನು,<br>
ಷೋಡಶದಿನಕ್ಕೆ ಶಿವಯೋಗಿಹನು ನೋಡಾ<br>
ಅಪ್ರಮಾಣ ಕೂಡಲಸಂಗಮದೇವ

ಎಂಬ ವಚನವು ಅಪ್ರಮಣ ಕೂಡಲಸಂಗಮದೇವ ಅಂಕಿತನಾಮ ಬಾಲ ಸಂಗ್ಯಯ್ಯನ ವಚನವಾಗಿತ್ತು. ಸೃಷ್ಠಿಯ ಮರ್ಮವನ್ನು ದೇಹ ರಚನಾ ಶಾಸ್ತ್ರವನ್ನು ಆಧುನಿಕ ವೈದ್ಯನಿಗೆ ಸವಾಲಾಗುವ ರೀತಿಯಲ್ಲಿ ಯಥಾಬ್ರಹ್ಮಾಂಡ ತಥಾಪಿಂಡಾಂಡ ಎಂಬುವ ರೀತಿಯಲ್ಲಿ ಮಗು ಸೃಷ್ಠಿಯ ಎಲ್ಲಾ ಆಯಾಮಗಳನ್ನು ಈ ವಚನದಲ್ಲಿ ವ್ಯಕ್ತಪಡಿಸುತ್ತಾರೆ. ಇದರ ಸೃಷ್ಠಿಯ ಪೂರ್ವದ ಇನ್ನು ಪಿಂಡ ಉತ್ಪತ್ತಿಯಂತೆಡೆ ಆ ಪೃಥ್ವಿಯಲ್ಲಿ ಅನ್ನ ಉತ್ಪತ್ತಿಯಾಗಿತ್ತು, ಅಂದರೆ ಒಬ್ಬ ರೈತ ಬೆಳೆದ ಬೆಳೆಯ ಉತ್ಪನ್ನದ ಫಲವು ಅನ್ನದ ರೂಪದಲ್ಲಿ ಪೃಥ್ವಿ ಎಂಬ ದೇಹದಲ್ಲಿ ರಸದ ಉತ್ಪತ್ತಿ ಮಾಡಿತ್ತು. ಆ ರಸದಲ್ಲಿ ರುಧಿರ ಉತ್ಪತ್ತಿಯಾಗಿತ್ತು. ಆ ರುಧಿರ ಉತ್ಪತ್ತಿಯ ಕೆಲವೇ ವಿದಗಳಲ್ಲಿ ಮಾಂಸ ಉತ್ಪತ್ತಿಯಾಗುವುವು. ಆ ಮಾಂಸ ಉತ್ಪತ್ತಿಯ ಕೆಲವೇ ದಿನಗಳಲ್ಲಿ ಮೆದಸ್ಸು ಉತ್ಪತ್ತಿಯಾಗುವುದು. ಆ ಮೆದಸ್ಸಿನ ಕೆಲವೇ ದಿನಗಳಲ್ಲಿ ಆಸ್ತಿ ಉತ್ಪತ್ತಿಯಾಗುವುದು. ಆಸ್ತಿಯ ಕೆಲವೇ ದಿನಗಳಲ್ಲಿ ಮಜ್ಜೆ ಉತ್ಪತ್ತಿಯಾಗುರುವುದು. ಆ ಮಜ್ಜೆಯ ಉತ್ಪತ್ತಿಯ

ಕೆಲವೇ ದಿನಗಳಲ್ಲಿ ಶುಕ್ಲ ಉತ್ಪತ್ತಿಯಾಗಿ ಯೋನಿಯ ಸೇರಿ ಸೃಷ್ಟಿಗೆ ಕಾರಣವಾಗುವುದು. ಚೆನ್ನ ಬಸವ ಪುರಾಣದ , ಚೆನ್ನ ಬಸವಣ್ಣ ನವರು ಸಿದ್ಧರಾಮರಿಗೆ ನಿರೂಪಿಸಿದಂತೆ 9-13 ರನೆಯ ಪದ್ಯದವರೆಗೆ ಮಗು ಹುಟ್ಟುವ ದಿನದ ಮಹತ್ವವನ್ನು ಕುರಿತು ವಾರ, ಮಾಸ , ಋತುಗಳನ್ನು , ಬೆಳಗ್ಗೆ ಮಾಧ್ಯಾಹ್ನ , ಸಂಜೆ ಕಾಲ ಭೇದಗಳನ್ನು ವರ್ಣ ಭೇದಗಳನ್ನು ಆಯುಷ್ಯ ಬೇದನಗಳನ್ನು ಪರಿಪರಿಯಾಗಿ ಬಿಡಿಸಿರುತ್ತಾರೆ. 11-12ನೇಯ ಶತಮಾನದಲ್ಲಿ ಕಾರಣ, ಹಸಿಗೆ ಶರೀರ ವಿಜ್ಞಾನ ಎಸೆಪಿನ ಪಿಂಡುತ್ಪತ್ತಿಯಂ ಬಳಿಕ ಕಾರಣ ಹಸಿಗೆಯಂ, ಜ್ಞಾನತ್ರಯಂಗಳ ನಿಭೇಪಪಂ ಅಸನಾಗಿಸಿದ್ದಾಕಾಮೇಶ್ವರಿಗೆ ಗುರು ಚೆನ್ನ ಬಸವಂ ನಿರೂಪಿಸಿದರು.

ಋತುಸ್ನಾನಪಾದ ಮೊದಲೆಯದಿನ ಪತಿ- ಪತ್ನಿ

| | | |
|---|---|---|
| ಸಂಭೋಗ ಮಾಡಿದರೆ | - | ಕುಲಗೇಡಿ ಮಗಳು ಅಥವಾ ಮಗ |
| ಎರಡನೆಯ ದಿನಕ್ಕೆ | - | ಪಾಪಿಯು |
| ಮೂರನೇಯ ದಿನಕ್ಕೆ | - | ಕಳ್ಳನು |
| ನಾಲ್ಕನೇಯ ದಿನಕ್ಕೆ | - | ಕಪಟ |
| ಐದನೇಯ ದಿನಕ್ಕೆ | - | ಬುದ್ಧಿವಂತನು |
| ಆರನೇಯ ದಿನಕ್ಕೆ | - | ಋತ-ಗೇಡಿ- ಮಗ ಹುಟ್ಟುವನ್ನು |
| ಏಳನೇಯ ದಿನಕ್ಕೆ | - | ದಯ ಗುಣಉಳ್ಳವನು |
| ಎಂಟನೇಯ ದಿನಕ್ಕೆ | - | ದಾರಿದ್ರ್ಯವಂತ |
| ಒಂಭತ್ತನೇಯ ದಿನಕ್ಕೆ | - | ಐಶ್ವರ್ಯವಂತ |
| ಹತ್ತನೆಯ ದಿನಕ್ಕೆ | - | ಕಾಮಾಂದ |
| ಹನ್ನೊಂದನೇ ದಿನಕ್ಕೆ | - | ವೈರಾಗ್ಯಶಾಲಿ |
| ಹನ್ನೇರಡನೇಯ ದಿನಕ್ಕೆ | - | ಕೋಪಿಷ್ಠ |
| ಹದಿಮೂರನೇಯ ದಿನಕ್ಕೆ | - | ಪಂಡಿತ |
| ಹದಿನಾಲ್ಕನೇಯ ದಿನಕ್ಕೆ | - | ಚಂಚಲ ಸ್ವಭಾವ |
| ಹದಿನೈದನೇಯ ದಿನಕ್ಕೆ | - | ರಾಜುನು |
| ಹದಿನಾರನೇಯ ದಿನಕ್ಕೆ | - | ಶಿವಯೋಗಿ ಹುಟ್ಟುವನು |

ಎಂದು ಚೆನ್ನ ಬಸವಣ್ಣ ಪುರಾಣದಲ್ಲಿ ವಿರುಪಾಕ್ಷ ಪಂಡಿತರು ಹೇಳುತ್ತಾರೆ ಪತಿ-ಪತ್ನಿಯರು ಸಂಭೋಗ ಹೊಂದುವ ಸಂದರ್ಭದಲ್ಲಿ ಬೇರೆಯಾವನ್ನಾದರೂ ಮನಸ್ಸಿನಲ್ಲಿ ಇರಿಸಿಕೊಂಡಿದ್ದರೆ ಅಥವಾ ಸಂಭೋಗದಲ್ಲಿ ಕೂಡಿದಾಗ ಪುರುಷನಾಗಲಿ ಅಥವಾ ಮಹಿಳೆಗಾಗಲಿ, ಪರ ಪುರುಷ ,ಪರ ಮಹಿಳೆಯರ ಮನಸ್ಸು ಇದ್ದೊಡೆ ಹುಟ್ಟುವ ಮಗು ಜಾರಾನಾಗುವುದು. ಆದರೆ ಸತಿ-ಪತಿಗಳ ಇಬ್ಬರ ಮನಸ್ಸು ಒಂದೇ ಆಗಿ ಶಿವಧ್ಯಾನದಲ್ಲಿದ್ದರ್ಫೆ ಹುಟ್ಟುವ ಮಗು ಶಿವಯೋಗಿಯಾಗುವುದು. ಇದು ಆಧುನಿಕ ವೈದ್ಯಕೀಯ ಶಾಸ್ತ್ರಕ್ಕೆ ಒಂದು ರೀತಿಯಲ್ಲಿ ಕನ್ನಡಿಯಾಗದೆ ಇನ್ನು ಸ್ತ್ರೀ ಪುರುಷರುಗಳ ಕೂಟದ ಬೇದಂತಂಡೆ ಸ್ತ್ರೀಪುರುಷರ ಸಂಭೋಗ ಕಾಲದಲ್ಲಿ ಸ್ತ್ರೀಗೆ "ಅಘಾನವಾಯು" ಇದಿರಾದರೆ ಮಕ್ಕಳು ಇಬ್ಬರು ಹುಟ್ಟುವರು. ಪುರುಷರಿಗೆ ಷಷ್ಯಿಸ್ವರ, ಸ್ತ್ರೀಗೆ ರವಿಸ್ವರ ಪಾದಕೆ ಪುರುಷ ( ಗಂಡು

ಮಗು) ಹುಟ್ಟುವನು, ಸ್ತ್ರೀಗೆ ಷಷ್ಯಿಸ್ವರ, ಪುರುಷರಿಗೆ ರವಿಸ್ವರವಾದರೆ ಸ್ತ್ರೀ (ಹೆಣ್ಣು ಮಗು) ಹುಟ್ಟುವುದು, ಸ್ತ್ರೀ ಪುರುಷಬ್ಬಿರಿಗೆಯು ಸ್ವರ ಸಂಚಲವಿದಿದ್ದರೆ ಗರ್ಭವುಂಟು, ಸ್ತ್ರೀ ಪುರುಷರಿಬ್ಬರಿಗೆಯು ಸ್ವರ ಸಂಚಲನವಾದರೆ ಗರ್ಭವಿಲ್ಲ ಪುರುಷಾಗ್ನಿ ಸ್ವರ, ವಿಶೇಷವಾದರೆ ಬಂಜೆಯಾಗುವಳು ನೋಡಾ ಎಂದು ವಚನಗಳಲ್ಲಿ, ಕರಣ ಅಸಿಗೆಗೆ ಸಂಬಂಧಿಸಿದ ವಚನಕಾರರು ಹೇಳುತ್ತಾರೆ. ಬೆಳಗ್ಗಿನ ಸೂರ್ಯೋದಯ ಸಮಯಕ್ಕೆ ಹುಟ್ಟಿದರೆ ಕೋಪಿಷ್ಠ, ಮಧ್ಯಾಹ್ನವಾದರೆ – ಪಾಪಿಷ್ಟ, ಸಂಜೆ ವೇಳೆಗೆ ಹುಟ್ಟುವವ – ತಾಪ ನಷ್ಟ– ಕಷ್ಟಗಳನ್ನು ಉಂಟು ಮಾಡುವನು, ರಾತ್ರಿಯಾದಡೆ ಗುಣಾಢ್ಯ ಎಂದು ಅಥವಾ ಸದ್ಗುಣಿಗಳನ್ನುವುಳ್ಳ ಸ್ವಭಾವದ ಮಗು ಜನಿಸುವುದು, ಈ ಎಲ್ಲಾ ಸಮಯವನ್ನು ಕುರಿತು ಹೇಳಿದ್ದಾರೆ. ಇನ್ನು ಕಾಲಭೇದವಂತೊಂಡನೆ ಪ್ರಥಮ ಕಾಲದಲ್ಲಿ ಹುಟ್ಟಿದ ಮಗನು ಕೋಪಿಯಾಹನು, ದ್ವಿತೀಯ ಕಾಲದಲ್ಲಿ ಹುಟ್ಟಿದ ಮಗನ್ನು ಪಾಪಕರ್ಮಶೀಯಾಗಿಹನು, ಎಂದು ಗಳಿಗೆಗೆ ಹುಟ್ಟಿದ ಮಗನು ಜ್ಞಾನಿಯಾಹನ ಮಧ್ಯರಾತ್ರಿಯಲಿ ಹುಟ್ಟಿದ ಮಗನು ಶಾಂತಿ – ಧಾತ ಸಮಾನತೆಯುಳ್ಳ ಪುರುಷನಾಹನು. ಬೆಳಿಗಾಗುವ ಜಾವದಲ್ಲಿ ಹುಟ್ಟಿದ ಮಗನು ಪರಮ ಯೋಗಯೊಂದನು ನೋಡಾ ಅಪ್ರಮಣ ಕೂಡಲಸಂಗಮ ದೇವ ಎಂಬ ವಚನದ ಕಾವ್ಯನಾಮವಾಗಿದ್ದು, ಬಾಲ್ಯ ಸಂಗಯ್ಯ ನವರ ಸಮಗ್ರ ವಚನ ಸಾಹಿತ್ಯ ಸಂಪುಟ –13 ರಲ್ಲಿ ಕರಣ ಹಸಿಗೆ ಸಂಬಂಧಿಸಿದ ಪಿಂಡುತ್ಪತಿಯ 106ನೇ ಯ ಪುಟದಿಂದ ದೇಹ ರಚನ ಶಾಸ್ತ್ರದ ಆಯ್ದ ವಚನಗಳು ಮತ್ತು ತತ್ವಗಳನ್ನು ತೆಗೆದುಕೊಂಡಿದೆ. ದೇಹದಲ್ಲಿ ಪಿತ್ತ, ಶ್ಲೇಷ ಕ್ರಮವಾಗಿ ಒಂದು ಹಾಗೂ ಎರಡು ಒಳ್ಳವಿರುವುದು. ಮಾಂಸ 20 ಬಳ್ಳ, ಕೊಬ್ಬು –10 ಬಳ್ಳ, ರಕ್ತ – 10 ಬಳ, ಮೆದಸ್ಸು 05 ಬಳ್ಳ, ವೀರ್ಯಾ–03 ಬಳ್ಳ, ಪ್ರಮಾಣ ದೇಹದಲ್ಲಿರುವುದು.

## ಆಧುನಿಕ ವೈದ್ಯ ಶಾಸ್ತ್ರ

ಶ್ರೀ ಚೆನ್ನಬಸವಣ್ಣನವರು ಕರಣ ಹಸಿಗೆಯನ್ನು ಸೂಕ್ಷ್ಮ ಅತಿ ಸೂಕ್ಷ್ಮವಾಗಿ ಸಂಪೂರ್ಣ ಅರ್ಥಮಾಡಿಕೊಂಡು ಭಾಗಗಳನ್ನು ವಿಭಜನೆ ಮಾಡುತ್ತಾ ಆಧುನಿಕ ವೈದ್ಯರು ಶರೀರವನ್ನು ಎಂದರೆ ದೇಹವನ್ನು ಸರ್ವಾಂಗಾಂಗಳನ್ನು ಅಂದರೆ ತಲೆಯಿಂದ ಪಾದದವರೆಗೆ ಪ್ರತಿಯೊಂದು ಅಂಗಾಂಗಳನ್ನು ಹೆಕ್ಕಿ,ಇಂಜಿ, ಕೊಯ್ದು ಬಿಡಿ ಬಿಡಿಯಾಗಿ ಜೋಡಿಸಿ ಸೀಳಿದು ಸಂಪೂರ್ಣ ಅಭ್ಯಾಸಿಸಿದರೆ ಇಂದಿನ ವೈದ್ಯ ವಿಜ್ಞಾನ ಶರೀರ ಶಾಸ್ತ್ರದಲ್ಲಿ (ANATOMY) ಏನು ಹೇಳುತ್ತದೆ ಎಂಬುದನ್ನು ಸಂಷಿಪ್ತವಾಗಿ ಈ ರೀತಿಯಾಗಿ ಹೇಳಬಹುದು. ಮಾನವನ ದೇಹ ಸ್ತ್ರೀ–ಪುರುಷನ ಅಂಡಾ ಹಾಗೂ ವೀರ್ಯಾಣು ಸಂಭೋಗದಿಂದ ಪಿಂಡಾಂಡವಾಗುತ್ತದೆ. ನಂತರ ಅದು ಮುಖ್ಯವಾಗಿ ಮೂರು ಭಾಗಗಳಾಗುತ್ತದೆ.

(1) ಹೊರಪದರು (ECTODERM)

(2) ಮಧ್ಯಪದರು ( MESODERM)

(3) ಒಳ ಪದರು ( ENDODERM)

ಇವುಗಳಿಂದ ಶರೀರದ ಎಲ್ಲಾ ಅಂಗಾಂಗಳು ಉತ್ಪತ್ತಿ ಹಾಗೂ ಬೆಳವಣಿಗೆ ಹೊಂದಿ ಸಂಪೂರ್ಣಗೊಂಡು ಮಗುವು 280 ನೇಯ ದಿನ ಅಳುತ್ತಾ ಹೊರ ಜಗತ್ತಿಗೆ ಕಾಲಿಡುತ್ತದೆ. ಅಂದರೆ ಎಂಟು ತಿಂಗಳು ತುಂಬಿ ಒಂಭತ್ತನೆಯ ತಿಂಗಳಿಗೆ ಅಂದರೆ ಲಿಂಗಾಯಿತ ಪರಂಪರೆಯಲ್ಲಿ ಎಂಟನೇಯ ತಿಂಗಳಿಗೆ ಗರ್ಭ ಸಂಸ್ಕಾರ ಇರುವುದು, ಲಿಂಗಾಯಿತೇತಿರರು ಸೀಮಂತ ಕಾರ್ಯ, ಬಸಿರು ಊಟ, ಬಯಕೆಯ ಬುತ್ತಿ, ಬೀಜದ ಬುತ್ತಿ, ಇನ್ನು ನಾನಾರೀತಿಯ ಪದಗಳಿಂದ ಆಯಾಯ ಧರ್ಮಕ್ಕೆ ಅನುಸಾರವಾಗಿ ಕರೆಯಲ್ಪಡುತ್ತಾರೆ. ಈಗ ಜನನವಾದ ಮಗು ಜೀವನ ಪರ್ಯಾಂತ ಬೆಳವಣಿಗೆ ಹೊಂದಿ ಸ್ಥೂಲ, ಸೂಕ್ಷ್ಮ ಕಾರಣ ತ್ರಿಶರೀರದ ಸಾದಕ ಭಾದಕಗಳನ್ನು ಭೂತ, ವರ್ತಮಾನ, ಭವಿಷ್ಯತ್ತನ್ನು ಅನುಭವಿಸಿ ಮೇಲಾಗಿ ಕೀಳು, ಹುಚ್ಚ, ನೀಚ,ಬಡವ, ಬಲ್ಲಿದ ಎಂಬ ಅನೇಕ ಸವಕಳಿ ಹೊಂದುತ್ತಾ ಮುಪ್ಪು ಬಂದು, ಒಂದು ದಿನ ಮರಣ ಹೊಂದುತ್ತಾರೆ.

ಯಾವ ಯಾವ ಆವಯವಗಳು ಯಾವ ಯಾವ ಕೆಲಸ ಹೇಗೆ ಮಾಡುತ್ತವೆ ಎಂಬುದನ್ನು ಈ ಶಾಸ್ತ್ರ ನಿಖರವಾಗಿ ಹೇಳುತ್ತದೆ. ಎಲುಬು, ಮಾಂಸ, ಹೃದಸ್ಯ, ಪಪ್ಪುಸ , ಮೆದುಳು, ಜಠರ, ಕರಳು, ಜನನೇಂದ್ರಿಯ ಮೊದಲಾದ ಅಂಗಾಂಗಳು ಉಧ್ಬವಿಸುವ ಬೆಳವಣಿಗೆ ಹೊಂದುವಾಗ ಆಕಸ್ಮಾತ್ ಯಾವುದಾದರು ಹುಟ್ಟು ಊನುಗಳು (ಅಂಗಹೀನತೆ) ಅಥವಾ ದಿವ್ಯಾಂಗ ಚೇತನರಾಗಿ ( CONGENTAL, ANOMALICS) ಉದಾಹರಣೆಗೆ :- ಅರಿದ ತುಟಿ, ಸೀಳು ತುಟಿ, ಇತ್ಯಾದಿಗಳ ಬಗ್ಗೆ ಹೇಳಬಲ್ಲದು ಅಲ್ಲದೆ ಪಿಂಡಾಂಡದಲ್ಲಿ ಹುಟ್ಟುವ ಮಗುವಿನ ಅಂಗದ ಬಗ್ಗೆ ಸ್ತ್ರೀಯಿಂದ ಯಾವಾಗಲು ದೊರೆಯುವ "x" ಕ್ರೋಮೋಜೋಮ್ ಜೊತೆ ಪುರುಷನಿಂದ ಒದಗಿಸಲ್ಪಡುವ "x" or "y" ಕ್ರೋಮೋಜೋಮ್‌ಗಳಲ್ಲಿ "x" ಕ್ರೋಮೋಜೋಮ್ ಜೊತೆ ಸಂಭೋಗದಲ್ಲಿ "x" "x" ಕ್ರೋಮೋಜೋಮ್ ಹೊಂದಿದ ಮಗು "ಹೆಣ್ಣು" ಪುರುಷನ "y" ಕ್ರೋಮೋಜೋಮ್ ಜೊತೆ ಸಂಭೋಗದಲ್ಲಿ "x" "y" ಕ್ರೋಮೋಜೋಮ್ ಹೊಂದಿದ ಮಗು ಗಂಡು ಎಂಬ ಹಾಸ್ಯವನ್ನು ತಿಳಿಯುತ್ತವೆ. ಆದರೆ ಈ ವೈದ್ಯ ಶಾಸ್ತ್ರ ಕೆಲವು ಕುತೂಹಲ ವರ್ಣ ಪ್ರಶ್ನೆಗಳಾದ ಹುಟ್ಟು ಉನುಗಳು ಏಕೆ? ಅನಾಟಮಿ (ANATHAMY) ಈ ಹುಟ್ಟು ಉನೂಗಳು ಇಂತಹದೆ ಮಗುವಿನಲ್ಲಿ ಏಕೆ? ಸ್ತ್ರೀಯ ಅಂಡದ "x" ಕ್ರೋಮೋಜೋಮ್, ಪುರುಷನ ವೀರ್ಯಾಣ್ಯುವಿನಲ್ಲಿರುವ "x" or "y" ಹರಿಸಲು ಕಾರಣವೇನು? ಇದನ್ನು ನಿರ್ಧರಿಸುವಂತರು ಯಾರು? ಅಂಡ ಹಾಗೂ ವೀರ್ಯಾಣುಗಳಿಗೆ ಮೂಲ ಎಲ್ಲ? ಇಂತಿಂತಿಹ ಅಂಗಾಂಗಳ ಕೆಲಸ ಇಂತಹದ್ದೇ ಏಕೆ? ಇದೇ ರೀತಿ ಏಕೆ? A ಮೊದಲಾದ ಹಲವು ಪ್ರಶ್ನೆಗಳಿಗೆ ಉತ್ತರ ಸಿಗುವುದಿಲ್ಲ ಎಂದು ಡಾ॥ ಹೆಚ್. ತಿಪ್ಪೇರುದ್ರವರ ಶಬ್ಧಗಳಲ್ಲಿ ಈ ಮೊದಲೇ ವೀರಶೈವಲಿಂಗಾಯಿತ ಸಿದ್ಧಾಂತದ ಹಿನ್ನೆಲೆಯಲ್ಲಿ ಪ್ರಸ್ತಾಪಿಸಿದಂತೆ ಈ ವೈದ್ಯ ವಿಜ್ಞಾನದಲ್ಲಿ ವೈದ್ಯಶಕ್ತಿಯ ಅಸ್ತಿತ್ವಕ್ಕೆ ಅನಿವಾರ್ಯವಾಗಿ ಶರಣಾಗಬೇಕು. 20ನೇ ಶತಮಾನದಲ್ಲು ಮುಂದುವರೆದ ನಮ್ಮ ಮಧ್ಯ ವಿಜ್ಞಾನಕ್ಕೆ ಉತ್ತರಿಸಲು ಅಸಾಧ್ಯವಾದ ಹಲವಾರು ಪ್ರಶ್ನೆಗಳಿಗೆ 11-12

ನೇಯ ಶತಮಾನದಲ್ಲಿಯೂ ಶರಣರು ಸೃಷ್ಠಿ ಕರ್ತನ ಮೊರೆಹೊಕ್ಕು ಬಹು ದೂರ ಬಹು ಎತ್ತರಕ್ಕೆ ಏರಿ ಇಂತಹುಗಳಿಗೆ ಹಲವಾರು ಜಿಜ್ಞಾಸೆಯೊಂದಿಗೆ ಉತ್ತರಿಸಿದ್ದರೆಂಬುದನ್ನು ಶ್ರೀ ಚೆನ್ನಬಸವಣ್ಣ ನವರ ವಚನಗಳ ಮಾತುಗಳಿಂದ ಕಂಡುಕೊಳ್ಳಬಹುದು.

ಮನುಷ್ಯನ ದೇಹದಲ್ಲಿ 3.5 Cr ಕೋಟಿಗ ಕೂದಲುಗಳಿವೆ, ದೇಹ 12000 ಅಲದ ಲೆಕ್ಕವಿದೆ, 360– ಮೂಳೆಗಳಿವೆ ಎಂದು ಕರಣ ಹಸಿಗೆಯಲ್ಲಿ ಚೆನ್ನಬಸವಣ್ಣ ಎಂದು ಇವರು, ಹೇಳಿದ್ದಾರೆ. ವಿಜ್ಞಾನ ಶಾಸ್ತ್ರದ ಪ್ರಕಾರ ಕೂದಲು ಮುಖದಲ್ಲಿ –600, ಸೆಂ.ಮಿ, ಉಳಿದ ಭಾಗದಲ್ಲಿ 60 ಸೆಂ.ಮೀ. ಮತ್ತು ಇನ್ನು ಉಳಿದ ಭಾಗದಲ್ಲಿ 60 ಸೆಂ.ಮೀ. ಇವೆ. ದೇಹದಲ್ಲಿ ಇರುವ ಒಟ್ಟು ಎಲುಬುಗಳ ಸಂಖ್ಯೆ: 206. ಕೈಗಳಲ್ಲಿ 32+32=64, ಕಾಲುಗಳು 31+31=62, ಬೆನ್ನೆಲುಬು – 33, ತಲೆಬುರುಡೆ –22, ಪಕ್ಕೆಲೆಬು – 24, ಎದೆ ಎಲುಬು –01, ಒಟ್ಟು 206 ಹೇಳಲಾಗಿದೆ. ಚೆನ್ನಬಸವಣ್ಣ ನವರು ಹೇಳುವಂತೆ ಪೃಥ್ವಿದಿ ಪಂಚಭೂತಗಂಗಳು ಇದಕ್ಕೆ ವಿವರ :- ಅಸ್ತಿ, ಚರ್ಮ, ಮಾಂಸ, ರೋಮ, ಮಜ್ಜೆ ಇವೈದು ಪೃಥ್ವಿಯ ಅಂಶ.

ಶುಕ್ಲಶೋಣಿತ, ಶ್ಲೇಷ, ಪಿತ್ತರಕ್ತ, ಇವೈದು, ಅಪ್ಪುವಿನ ಅಂಶ,
ಹಸಿವು, ತೃಷೆ, ನಿದ್ರೆ, ಆಲಸ್ಯ ಸ್ತ್ರೀಸಂಗ, ಇವೈದು ಅಗ್ನಿ ಅಂಶ,
ಹರಿಯುವುದು, ಕುಳ್ಳಿರುವುದು, ಏಳುವುದು, ಮೈಮುರಿಯುವುದು, ನೆಡೆಯುವುದು ಇವೈದು ವಾಯುವಿನ ಅಂಶ.
ಢಂಬು ಪ್ರಕಟ, ಪ್ರಪಂಚ, ಅಬ್ರಬ್ಬಾಯ, ಆನಂಥ, ಇವೈದು ಆಕಾಶದ ಅಂಶ.

ಇಂತಿ ಅಂಗಶುದ್ಧಾಂಗಗಳ ಬಿಟ್ಟು ಲಿಂಗಾಂಗವ ಮಾಡಬಿಲ್ಲಡೆ ಕೂಡಲ ಚೆನ್ನಸಂಗಯ್ಯನಲ್ಲಿ ಶರಣನೆನಿಸುವನು.

ಚೆನ್ನಬಸವಣ್ಣನವರು ಕರುಣ ಹಸಿಗೆ ದೇಹವೆಂಬ ಪೃಥ್ವಿಯಲ್ಲಿ ಪಂಚ ಭೂತಗಳಿಂದ ಹುಟ್ಟಿದ ಈ ದೇಹದ ಮಲತ್ರಯಗಳು, ಗುಣತ್ರಯಗಳು, ಜ್ಞಾನೇಂದ್ರಿಯಗಳು, ನವದ್ವಾರಗಳು, ಅಷ್ಟಮದಗಳು ವಾಯು ಇತ್ಯಾದಿ ಅಂಗ ಭೂತಗಳನ್ನು ಪಂಚಭೂತಗಳ ಅಂಶವೆಂದು ಅಸಿವು, ತ್ರಿಷ, ನಿದ್ರೆ, ಅಲಸ್ಯ ಸ್ತ್ರೀಸಂಗ, ಅಗ್ನಿಯ ತತ್ವದಿಂದ ಬಂದಿತ್ತೆಂದು ವೈಜ್ಞಾನಿಕ ದೃಷ್ಟಿಕೋನದಲ್ಲಿ ಅನುಭವಿಸಿ ಆರಾಧಿಸಿದ ತತ್ವದಂತೆ ತೆರೆದಿಟ್ಟಿದ್ದಾರೆ. ಈ ವಚನ ತತ್ವವನ್ನು ಚೆನ್ನಬಸವಣ್ಣನವರ 3ನೇ ವಚನ ಸಂಪುಟದಲ್ಲಿ 1351ನೇ ವಚನ, ಪುಟ ಸಂಖ್ಯೆ: 477 ರಲ್ಲಿ ಕರಣ ಹಸಿಗೆಯ ವಚನ ತತ್ವ ವ್ಯಕ್ತವಾಗಿದೆ. ತಂದೆಯಿಂದ ಮಗುವಿಗೆ ನರ, ರಜಸ್ಸುಕೂದಲು, ಎಲುಬುಗಳು, ಬರುವುದು ತಾಯಿಯಿಂದ ಚರ್ಮ, ಮಾಂಸ, ರಕ್ತ, ಬರುವುದು ರಜಸ್ಸು ಹೆಚ್ಚಿದ್ದರೆ – ಗಂಡು ಮಗ, ರಕ್ತ ಹೆಚ್ಚಾಗುವುದರಿಂದ – ಹೆಣ್ಣು ಮಗು ಜನಿಸುವುದು, ಇವೆರೆಡು ಸಮವಿದ್ದರೆ ಮಗು ನಪುಂಸಕವಾಗುವುದು ಎಂದು

ವಿರುಪಾಪ್ ಪಂಡಿತರು ರಚಿಸಿರುವ ಚೆನ್ನ ಬಸವಣ್ಣನ ಪುರಾಣದಲ್ಲಿ ಕರಣ ಹಸಿಗೆಯನ್ನು ವಿವರಿಸಿದ್ದಾರೆ.

ಆ ಚೈತನ್ಯ ಬೀಜಶುಕ್ಲ ಶೋಣಿತಂಗಳು ಬದ್ಧವಾಗುವುದು, ಪುರುಷ ವೀರ್ಯ ಘನವಾದೊಡೆ ಗಂಡು ಮಗು ಹುಟ್ಟುವುದು, ಸ್ತ್ರೀ ವೀರ್ಯ ಘನವಾದೊಡೆ ಹೆಣ್ಣು ಮಗು ಹುಟ್ಟುವುದು. ಸಮಪಾದೊಡೆ ನಪುಂಸಕ ಹುಟ್ಟುವುದು. ಎಂದು ಕರಣ ಹಸಿಗೆಗೆ ಸಂಬಂಧಿಸಿದ ವಚನದಲ್ಲಿ ಬಾಲ ಸಂಗಯ್ಯ ನವರು ಕರಣ ಹಸಿಗೆ ವಚನದಲ್ಲಿ ವ್ಯಕ್ತ ಪಡಿಸಿದ್ದಾರೆ. ಈ ಎಲ್ಲಾ ವಚನಗಳ ದೇಹ ರಚನೆಯ ವ್ಯವಸ್ಥೆ ನೋಡಿವರ ಕರಣ ಹಸಿಗೆ ಮಿಶ್ರಾಪ್ರಾಣ ಒಂದಕ್ಕೊಂದು ಸಂಬಂಧವುಳ್ಳ ದೇಹ ಆಹಾರ ಕ್ರಮಗಳನ್ನು ಒಂದು ಮಾಡಿ ರಚಿಸಿರುವ ದೇಹ ರಚನಾ ಶಾಸ್ತ್ರವಾಗಿದೆ. ಈ ದೇಹ ರಚನಾ ಶಾಸ್ತ್ರವು ಅದೋ ಮುಖಗೊಳ್ಳದೆ ಉರ್ದೋಮುಖದಲ್ಲಿ ನೋಡಿದರೆ ಈ ತತ್ವ ಸಿದ್ಧಾಂತವು ಸತ್ಯವಾಗಿರುವುದು, ಉದಾಹರಣೆಗೆ:- ಇನ್ನು ವರ್ಣ ಬೇಧವೆಂತೆಂದೊಡೆ ಪೃಥ್ವಿಯ ಅಪ್ಪು ತೇಜ ಆಕಾರ ತತ್ವವನ್ನು , ಪೀತಾವರ್ಣ ಶ್ವೇತಾವರ್ಣ , ರಕ್ತಾ ವರ್ಣ, ಕೃಷ್ಣಾವರ್ಣ, ಧೂಮವರ್ಣ ಎಂದು ಸ್ವರ ಹೊಡೆದು ನೋಡುವಂತಹ ತೂರ್ಯಾತೀತದ ಗರ್ಭಮಾರ್ಗವನ್ನು ವರ್ಣವನ್ನು ವ್ಯಕ್ತಪಡಿಸುವ ವ್ಯವಸ್ಥೆಯನ್ನು 11-12ನೇಯ ಶತಮಾನದಲ್ಲಿಯೇ ಶಿವಶರಣರು ಕಂಡುಕೊಂಡಿರುವುದಕ್ಕೆ ಇವೆಲ್ಲವು ಉದಾಹರಣೆ ಆಗುತ್ತವೆ. ಇದನ್ನು ಸರಳವಾಗಿ ಜನಸಾಮಾನ್ಯರಿಗೆ ತಿಳಿಯಲು ಸಹಕಾರಿಯಾದ ವೈದ್ಯ ವಿಜ್ಞಾನವಾಗದೆ. ಕರಣ ಹಸಿಗೆಯ ಅಂತರಂಗದಲ್ಲಿ ನೋಡುವುದಾದರೆ ಅದರ ಅರ್ಥ ಹಲವು ಮುಖಗಳು ವಿಶೇಷ ವಿಭಿನ್ನವಾಗಿ ವ್ಯಕ್ತವಾಗುತ್ತವೆ. ಆಧ್ಯಾತ್ಮಕ ಹಿನ್ನೆಲೆಯಲ್ಲಿ ಚೆನ್ನಬಸವಣ್ಣನವರು ತಮ್ಮ ಅನುಭಾವದ ಹಾಗೂ ಸೃಷ್ಠಿ ತತ್ವ ಮನಃ ಶಾಸ್ತ್ರ, ಷಟಸ್ತಿಲ ತತ್ವ, ಆಧಾರದಿಂದ ದೇವಾರ್ತ ವಿಜ್ಞಾನ ಕುರಿತು ಜಗತ್ತಿನ ಉತ್ಪತ್ತಿ ದೇಹ ರಚನೆಯ ರಹಸ್ಯಗಳನ್ನು ಕುರಿತು ವಿವರಿಸಿದ್ದಾರೆ. ಶರಣರು ದೇಹಕ್ಕಿಂತ ಹೆಚ್ಚು ಅರ್ಥ ತಿಳಿಯಲು ಪ್ರಯತ್ನಿಸಿದ್ದಾರೆ. ಅವರ ನೆಲೆ, ಅದರ ಬೆಲೆ, ಕಾರ್ಯಗಳನ್ನು ಕಂಡುಕೊಂಡು ಅದರ ಕ್ರಿಯೆ ಕ್ರಮಗಳನ್ನು ವ್ಯಕ್ತ ಪಡಿಸುತ್ತಾರೆ. " ತಾಯಿಯ ಗರ್ಭದೊಳಗಿನ ಶಿಶುವು ತಾಯಿಯ ಕುರುಹನ್ನುರಿಯದು, ಆ ತಾಯಿ ತನ್ನ ಶಿಶುವಿನ ಕುರುಹುಹನ್ನು ಎಂದೂ ಅರಿಯಳು". ಎಂಬುವ ಹಾಗೆ ಕೋಟಿಗೊಬ್ಬ ತಾಯಿಗೆ ಮಾತ್ರ ಆ ತಾಯಿಯ ಶಿವಶರಣೆಯಾಗಿದ್ದಾರೆ. ತನ್ನ ಮಗುವಿನ ಕುರುಹನ್ನಾರಿಯಲು ಸಾಧ್ಯವಾಗುತ್ತದೆ ಎಂದು ಚೆನ್ನ ಬಸವಣ್ಣ ನವರ ಪುರಾಣದಲ್ಲಿ ವ್ಯಕ್ತವಾಗುತ್ತದೆ. ಉದಕಗೊಳಗೆ ಬಚ್ಚಿಟ್ಟು ಬಯಕೆಯ ಕಿಚ್ಚಿನಂತೆ, ಸಸಿಯೊಳಗಣ ರಸದ ರುಚಿಯಂತೆ, ನೆನೆಯೊಳಗಣ ಪರಿಮಳದಂತೆ ಕೂಡಲಸಂಗಮದೇವ ಕನ್ನೆಯ ಸ್ನೇಹದಂತೆ, ಸೃಷ್ಠಿಯ ಮರೆಮಾಚಿದ ಫಲವು ಅಘೋಚರದಲ್ಲಿ ವ್ಯಕ್ತವಾಗುವಂತೆ ಕಲ್ಲೊಳಗೆ, ಪಾದಕನಂತೆ, ಉದರ್‌ದೊಳಗೆ ಪ್ರತಿಬಿಂಬದಂತೆ, ಶಬ್ಧದೊಳಗಣ ನಿಶಬ್ಧದಂತೆ, ಆ ಸೃಷ್ಠಿಯ ರಹಸ್ಯವು ಬುದ್ಧಿಂಶದಲ್ಲಿ ಬುದ್ಧಿಕತೆ ತೋರುವಂತೆ , ಶರೀರದೊಳಗೆ ಆತ್ಮವು ಅಡಗಿದಂತೆ, ಈ ದೇಹ ಮತ್ತು ವಿಜ್ಞಾನ ಕುರಿತು ಆಳ-ಅಂತರಾಳದಲ್ಲಿ ಶಿವ ಶರಣರು ಅಭಿವ್ಯಕ್ತಗೊಳಸುತ್ತಾರೆ. ಶೂನ್ಯಜ್ಞಾನಿ ಶಿವನಿಂದ ನೆಡೆಯುವುದು, ಆತ್ಮ ಶಿವಮಯ ಅದೇ ಪರಮಾತ್ಮ ಇದು ಪಂಚಭೂತಗಳಿಂದಾದ ದೇಹದಲ್ಲಿ ಸೇರಿ ಹುಟ್ಟ ಬೆಳೆದು ಕೃಷವಾಗುವವರೆಗು ಇದು

ಜೀವಕಳೆಯಿಂದ ಶಾಂತಿಯುತವಾಗಿ ತನ್ನ ಕಾರ್ಯ ನಿರ್ವಹಿಸುವುದು, ಇದರ ಎಲ್ಲಾ ವಿಷಯಂಗಳ ಕುರಿತು ಶರಣದಲ್ಲಿ ಶ್ರೇಷ್ಟ ಜ್ಞಾನ ನಿಧಿ ನಕ್ಷತ್ರನಾದ ಚೆನ್ನಬಸವಣ್ಣ ನವರು ಕರಣ ಹಸಿಗೆಯಲ್ಲಿ ನಿರೂಪಾದಿಸಿದ್ದಾರೆ.

ಆದಿ, ಅನಾದಿ, ಆತ್ಮ – ವಿವೇಕ ಅನುಭಾವ, ಸಂಬಂಧ ಎಂತಿಪ್ಪದೆಂದೊಡೆ ಆದಿಯೇ ದೇಹ ಅನಾದಿಯ ಆತ್ಮ ಇಂತಿ ಆದಿ ಅನಾದಿಯ ಮೇಲಪ್ಪಿವುದೆ ಪರಮಪ್ರಣವ, ಅ ಪರಪ, ಪ್ರಣಪದ ಪರಮ ಪ್ರಕಾಶನೇ ಚಿಚ್ಚಕ್ತಿ

ಆ ಚಿಚ್ಛಕ್ತಿಯ ಸುವರ್ಣ ಪ್ರಬೆಯೇ ಮೇಣ ಪರಮನಾದರೆ ಸುನಾದ ಬ್ರಹ್ಮ.

ಆ ಸುನಾದ ಬ್ರಹ್ಮದ ಮೇಲಣ ಸೂಕ್ಷ್ಮ ಲಿಂಗವೇ ನಾದ ಬಿಂದು ಕಳಾತೀತವಾದ ಜ್ಯೋತಿರ್ಮಯಲಿಂಗ, ಆ ಲಿಂಗದಿಂದೊಗೆದ ದೇಹಿಂದ್ರಾಯ ಮನಂ ಪ್ರಾಣಾಧಿಗಳಲ್ಲ ಆ ಲಿಂಗದ ಉಪಕರಣಂಗಳಾವ ಕಾರಣ.

ಆ ಮನಂ ಪ್ರಾಣಾಧಿಗಳೆಲ್ಲ ಅ ಪರ ವಸ್ತುಲಿಂಗೆ ಭಿನ್ನವೆಂಬ ಆ ಜ್ಞಾನಯೋ ಮೆಚ್ಚ ಕೂಡಲ ಚೆನ್ನಸಂಗಯ್ಯ (ಚೆನ್ನ ಬಸವಣ್ಣನ ವರ 3ನೇ ಸಂಪುಟದಲ್ಲಿ ವ್ಯಕ್ತವಾಗಿರುವ ಕರಣ ಹಸಿಗೆಯ ದೇಹ ರಚನಾ ಶಾಸ್ತ್ರದ ಸಂಬಂಧಿಸಿದ ವಚನವಿದು)

ಅದಿ ದೇಹ ಅನಾದಿ ಅತ್ಮ– ನಾದ, ಬಿಂದು ,ಕಳೆ , ಅಕಾರ, ಮಕಾರ , ಉಕಾರ , ಅಂತರ್ ಶಕ್ತಿಯಾಗಿ ದೇಹ ಉತ್ಪತ್ತಿಗೆ ಕಾರಣವಾಗುವಂತೆ ಜಗತ್ಪುತ್ತಿ ಅನ್ವೇಷಣೆ ಇಲ್ಲ ವ್ಯಕ್ತವಾಗುತ್ತದೆ, ತಂದೆಯ (ಗಂಡು) ವೀರ್ಯದೊಳಗೆ ತಾಯಿಯ (ಹೆಣ್ಣು) ರಜಸ್ವ ಸೇರಿಕೊಂಡ ಪ್ರಥಮ ದಿನ ಗರ್ಭಾಣುವಾಗುವುದು. ಈಗೆ ಐದು ರಾತ್ರಿಯಲ್ಲಿ ಗುಳ್ಳೆ ನಂತರ ಹತ್ತನೆಯ ದಿವಸಕ್ಕೆ ರಕ್ತವಾಗಿ 14ನೇಯ ದಿನಕ್ಕೆ ಮಾಂಸ, ಮುಂದೆ 20ನೇಯ ದಿವಸಕ್ಕೆ ಮಾಂಸ ಗಟ್ಟಿಯಾಗುವುದು ಎಂದು ಚೆನ್ನ ಬಸವಣ್ಣನವರು ಹೇಳುತ್ತಾರೆ. ಇದನ್ನು ಇಂದಿನ ವೈದ್ಯ ವಿಜ್ಞಾನವು ಒಪ್ಪುವುದು. ಋತುಮತಿಯಾಗುವ ಹಿಂದಿನ 14ನೇಯ ದಿನ ಸ್ತ್ರೀಯ ಪಿಂಡ ಹೊರ ಬಿದ್ದು 24 ಗಂಟೆಗಳ ಮೊದಲು ಗರ್ಭಾಣು ಉತ್ಪತ್ತಿಯಾಗಿ 26 ಗಂಟೆಗಳಲ್ಲಿ ಅದರ ಮೊದಲ ವಿಭಜನೆ ಪ್ರಾರಂಭವಾಗಿ 18 ರಿಂದ 21ನೇಯ ದಿನ ರಕ್ತ ಸಂಚಲನ (FOETAL – PLACENTAL CIRCULATION) ಶುರುವಾಗುತ್ತದೆ. 3ನೇಯ ವಾರ ಹೊರ ಮತ್ತು ಒಳ ವಿವರುಗಳ ವಿಭಜನೆಯಿಂದ ಮಗುವಿನ ಬೆಳವಣಿಗೆ ಮುಂದುವರೆಯುತ್ತದೆ. 25ನೇಯ ದಿನಕ್ಕೆ ಅವಯವ ಹುಟ್ಟು ನಂತರ ಒಂದು ತಿಂಗಳಲ್ಲಿ ತಲೆ ಕಾಣುವುದು, ಮುಂದೆ 2 ತಿಂಗಳಲ್ಲಿ ತೋಳು ತೊಡೆ ಮಾಡುವುದು, ಮುಂದೆ ಮೂರನೇಯ ತಿಂಗಳಲ್ಲಿ ಕೈಕಾಲು ಬೆರಳುಗಳು ಸರಿಯಾಗಿ ಕಾಣುವವು, ನಾಲ್ಕನೆಯ ತಿಂಗಳಗೆ ಕಣ್ಣು,ಕಿವಿ, ಮೂಗು , ಪುಷ್ಪ, ಜನೇಂದ್ರಿಯ ,ಕೂದಲು ಕಾಣಿಸಿಕೊಳ್ಳುವವು ಎಂದು ಚೆನ್ನ ಬಸವಣ್ಣನವರು ಹೇಳುತ್ತಾರೆ. ಇವುಗಳನ್ನು ಇಂದಿನ ವೈಜ್ಞಾನಿಕ (ULTRA SOUND) ಯಂತ್ರಗಳು ಸತ್ಯವೆಂದು ತಿಳಸುವವು ಇಂದಿನಿಂದ ವೈದ್ಯರು

ಹೇಳುವಂತೆ 3ನೇಯ ವಾರಕ್ಕೆ 3 ಮಿ.ಮೀ. ಇದು ಅದರಲ್ಲಿ ತಲೆ, ಕಣ್ಣು ಕಾಣುವುದು, 4ನೇಯ ವಾರಕ್ಕೆ ಕೈಕಾಲು ಕಾಣುವವು, 8ನೇಯ ವಾರಕ್ಕೆ 3 ಸೆಂ.ಮೀ. ಹಾಗೂ 2 ಗ್ರಾಂ ತೂಕ ಹಾಗೂ ಕಣ್ಣು ಕಿವಿ. ಬಾಯಿ, ಮೂಗು, ಬೆರಳುಗಳು ಹುಟ್ಟಿಕೊಂಡಿರುವವು 12ನೇಯ ವಾರಕ್ಕೆ ಅವರ ಅಳತೆ 8 ಸೇ.ಮೀ ಆಗಿ 19-20 ಗ್ರಾಂ, ಭಾರವಾಗುವುದು. ಮೆದೆಳು ಜನೇಂದ್ರಿಯ ಹುಟ್ಟಿಕೊಂಡಿ ಎಲುಬುಗಳಲ್ಲಿ ರಕ್ತ ಹುಟ್ಟಲು ಶುರುವಾಗುವುದು. ವಿರುಪಾಕ್ಷ ಪಂಡಿತರು ರಚಿಸಿದ ಚೆನ್ನ ಬಸವ ಪುರಾಣದಲ್ಲಿ 58ನೇಯ ಸಂಧಿಯಲ್ಲಿ ಈ ವಿಷಯದ ವಿವರ ಬರುತ್ತದೆ.

ಇದು ವೈದ್ಯ ವಿಜ್ಞಾನ ನಿರೂಪಿಸಿದ ಸತ್ಯವಾಗಿದೆ. ಋತು ಕಾಲದಲ್ಲಿ ದಂಪತಿಗಳು ಕೂಡಲು ಅನ್ನದಿಂದ ರಸೋತ್ಪತ್ತಿ ರಸದಿಂದ ರುಧಿರ ಉತ್ಪತ್ತಿ, ರುಧಿರದಿಂದ ಮಾಂಸ ಉತ್ಪತ್ತಿ, ಮಾಂಸದಿಂದ ಮೆವಸ್ಸು ಉತ್ಪತ್ತಿ, ಮೆದಸ್ಸುನಿಂದ ಅಸ್ತಿ ಉತ್ಪತ್ತಿ, ಅಸ್ತಿಯಿಂದ ಮೆಜ್ಜೆ ಉತ್ಪತ್ತಿ, ಮಜ್ಜೆಯಿಂದ ಶ್ಲೋಕ ಉತ್ಪತ್ತಿ , ಶ್ಲೋಕ ಉತ್ಪತ್ತಿಯಿಂದ ಋತು ಸ್ರಾವವಾಗಿ ದಂಪತಿಗಳಬ್ಬರ ಕೂಡುವಿಕೆಯಿಂದ ಪಿಂಡ ಉತ್ಪತ್ತಿಯಾಗುತ್ತದೆ. ಇದು ಇಂದಿನ ವೈದ್ಯ ವಿಜ್ಞಾನ ನಿರೂಪಿಸಿದ ಸತ್ಯವಾಗಿದೆ. ವೈದ್ಯ ಕ್ಷೇತ್ರದ ಇಂದಿನ ಸೂಕ್ಷ್ಮ ಉಪಕರಣದಿಂದ ಗರ್ಭದಾರಣೆಯು ಋತುಮತಿಯಾದ 14ನೇಯ ದಿವಸ ಎಂದು ಹೇಳಲಾಗಿದೆ. ಮಾತೆಯ ರಜಸ್ಸು ಪಿತೃ ವೀರ್ಯಗಳೊಂದಿಗೆ ಸಾತಿಶಯದಿಯಂ, ಪ್ರಥಮ ದಿನದಲ್ಲಿ ಕಲಲಮಾಹುದ ತೆರೆಯೊಳಗೆ ರಾತ್ರಿಗೆ ಒಬ್ಬೊಳಕೆಯಾಗಿ 10ನೇಯ ದಿವಸದೊಳಗೆ ಖ್ಯಾತಿಯಿಂ ರಕ್ತಬಲಿದ ಚತರ್ಪಶದಿಂ ಪಾತ್ರದೊಳ್ ಮಾಂಸದನಿಸಿ ವಿಸಂತಿ ದಿನಕ್ಕೊತು ತಸ್ಮಸವೇ ಘಟಗೊಂಬುದು ಸಿದ್ಧರಾಮ ಕೇಳರಚ್ಚರಿಯನು 16ನೇಯೆ ವಾರಕ್ಕೆ ತಲೆಯ ಕೂದಲು ಬೆಳೆದು ಗಂಡು ಹೆಣ್ಣೆಂಬ ಲಿಂಗ ತಿಳಿಯುವುದು. ಹೃದಯ ಮೂತ್ರಪಿಂಡ ಬೆಳೆಯುವುದು, ಗುದದ್ವಾರ, ಯೋನಿಗಳು ಕಾಣುವವು ಎಂದು ವೈದರು ಹೇಳುವರು. ಚೆನ್ನ ಬಸವಣ್ಣ ನವರು ಹೇಳುವಂತೆ ಮುಂದೆ 5ನೇ ತಿಂಗಳು ಆಯಿತ್ತೆಂದರೆ ನವದ್ವಾರ, ಜಠರ, 6ನೇ ತಿಂಗಳು ಉಗುರು, ಹುಟ್ಟುವುವು ತಲೆಗೂದಲು, ಕಾಣಿಸಿಕೊಳ್ಳುವವು, 7ನೇ ತಿಂಗಳು ಅಂಗಾಂಗಳು ಬಲಿಯುತ್ತಾ ಹೊಕ್ಕಳ ಬಳ್ಳಿಯ ತಾಯಿಯು ಆಹಾರ ಸೇವಿಸಿದ ರಸ ಮಗುವಿನ ಹೊಟ್ಟೆಗೆ ಹೋಗುವುದು. 8ನೇಯ ತಿಂಗಳಗೆ ಗುರುತು , ಜ್ಞಾನ ಸ್ಥಾಪಿತವಾಗಿ ತಾಯಿಯ ಎಲ್ಲಾ ಚಲನವಲನಗಳನ್ನು ಆ ಮಗು ಗ್ರಹಿಸಿ ಈ ಸಂದರ್ಭದಲ್ಲಿ ತಾಯಂದಿರು ಶಿವದ್ಯಾನ ಸಂಗೀತ, ವಚನಗಳಂದಿದ್ದರೆ, ಹುಟ್ಟುವ ಮಗು ಸ್ಮರಣ ಶಕ್ತಿಯಿಂದಿರುತ್ತದೆ. 9ನೇಯ ತಿಂಗಳಗೆ ತಂದೆಯ - ತಾಯಿಯ ಕರಳು ಬಳ್ಳಿಯಾಗಿ ತಾಯಿಯ ಅಕ್ಕರೆಯ ಕಂದನಾಗಿ ಕುಟುಂಬದ ಆಲದ ಮರದ ಅಂಕುರವಾಗಿ ಶಿವಶಕ್ತಿಯಿಂದ ಜನನವಾಗುವುದು. ಆಗ ಗುರುಕರುಣೆ ಸಂಸ್ಕಾರದಿಂದ ಮುಕ್ತನಾಗಿ ತಲೆಕೆಳಗಾಗಿ ಭೂಮಿಗೆ ಬಂದು ವಿಷ್ಣುವಾಯುವಿನಿಂದ ಅಜ್ಞಾನ ಹೊಂದಿ ದುಃಖ ಭರಿತನಾಗಿ ಅಳುತ್ತಾ ಭೂಸ್ಪರ್ಶ ಮಾಡುವುದು ಇದನ್ನು ಇಂದಿನ ವೈದ್ಯ ವಿಜ್ಞಾನಿಗಳು ಒಪ್ಪುತ್ತಾರೆ.

ತಂದೆ (ಪುರುಷ) ಯ ಅಂಶವಾದ ಒಂದು ಜೀವನಕೋಶ ವೀರ್ಯಾಣು ತಾಯಿ (ಸ್ತ್ರೀ) ಯ ಒಂದು ಜೀವಕೋಶ ಅಂಡಾಣು ಜೊತೆ ಸೇರಿದಾಗ

ಜೀವಾಂಕುರವಾಗುತ್ತದೆ. ವೀರ್ಯಾಣುವಿನಿಂದ ಅಂಡಾನು ಫಲಿತವಾಗಿ ಶರೀರದ ರಚನೆ ಪ್ರಾರಂಭವಾಗುತ್ತದೆ. ಫಲಿತ ಅಂಡಾಣು ವಿಭಜನೆಗೊಂಡು ಸಂಖ್ಯಾ ವೃದ್ಧಿ ಮಾಡುತ್ತದೆ. ಗರ್ಭಕೋಶದ ಬಿತ್ತಿಗೆ ಅಂಟಿಕೊಂಡು, ತಾಯಿಯ ದೇಹದಿಂದ ಪೋಷಣೆಯನ್ನು ಪಡೆದು, ಮಗುವಾಗಿ ಬೆಳೆಯುತ್ತದೆ. ಕೆಲವು ಜೀವಕೋಶಗಳು ಬದಲಾವಣೆಗೊಂಡು ಚರ್ಮವಾಗಿ ಮಿದುಳು ನರಮಂಡಲವಾಗಿ ಬೆಳೆದರೆ ಕೆಲವು ಜೀವಕೋಶಗಳು ಸ್ನಾಯುಗಳಾಗಿ ಹೃದಯ, ಜೀರ್ಣಾಂಗಗಳು, ಶ್ವಾಸಕೋಶಗಳು, ಯಕೃತ್ತು, ಮೂತ್ರಜನಕಾಂಗಳಾಗಿ, ವಿಕಾಸಗೊಳ್ಳುತ್ತದೆ. ತಾಯಿಯ ಗರ್ಭದಲ್ಲಿ ಮೂರು ತಿಂಗಳ ವಯಸ್ಸಿನ ಭ್ರೂಣಕ್ಕೆ ಶರೀರದ ಎಲ್ಲಾ ರೂಪರೇಖೆಗಳಿರುತ್ತವೆ 52 ಎಂದು, ಇಂದಿನ ಶರೀರ ವಿಜ್ಞಾನ ಹೇಳುವಂತೆ ಆಗಲೇ ಚೆನ್ನ ಬಸವಣ್ಣನವರು ತತ್ವಗಳ ಮೂಲಕ ದಿನ ವೇಳೆಗೆ ತಕ್ಕಂತೆ ಮಗುವಿನ ರಚನೆ ಹೇಳಿರುವರು. ವೀರ್ಯಾಣು ಅಂಡಾಣುವಿನಲ್ಲಿ 23 ಜೊತೆ ವರ್ಣತಂತುಗಳು, ಒಂದು ಲಕ್ಷ ವಂಶವಾಹಿನಿಗಳಿದ್ದು, ತಂದೆಯ (ಗಂಡು) ವಂಶದ ತಾಯಿ (ಹೆಣ್ಣು) ಯ ವಂಶದ ಅನೇಕ ಲಕ್ಷಣಗಳು ವಂಶವಾಹಿನಿಗಳಿಂದ ಮಗುವಿಗೆ ಬರುವುದು. ಇದರಿಂದ ಶರೀರ ರಚನೆಯಾಗುವುದು. ಚರ್ಮದ ಬಣ್ಣ, ಮೂಗು, ತಲೆ, ಕಣ್ಣು, ಕಿವಿ ಈ ಅಂಗಾಂಗಳ ಗಾತ್ರ, ಬಣ್ಣಗಳು , ವ್ಯಕ್ತಿತ್ವ, ಬುದ್ಧಿ ಹೇಗೆ ಎಲ್ಲವನ್ನು ವಂಶವಾಹಿನಿಗಳು ನಿರ್ಧರಿಸುತ್ತವೆ. ಈ ವಿಷಯವಾಗಿ ತಾತ್ವಿಕ ತಳಹದಿಯ ಮೇಲೆ ಚೆನ್ನ ಬಸವಣ್ಣ ನವರು "ಕರಣ ಹಸಿಗೆ" ಯಲ್ಲಿ ನಿರೂಪಿಸಿದ್ದಾರೆ, ಮಾನವ ಶರೀರ ಆತ್ಮ ತತ್ವವನ್ನು ತಿಳಿಸುವ ಕೃತಿ ಇದು.

ಅಧ್ಯಾತ್ಮದ ಹಾದಿಯಲ್ಲಿ ಸಾಗುವ ಸಿದ್ಧ ಕೃತಿ ಜಗತ್ತಿನ ಎಲ್ಲಾ ಮಾನವ ಕುಲಕ್ಕೆ ಜನಿ ತಿಳುದು ಅರ್ಥೈಸಿ ಅಳವಡಿಸಿಕೊಳ್ಳಲು ಬರೆದ ಶರೀರದ ಬಗ್ಗೆ ತಾತ್ವಿಕ ನೆಲಗಟ್ಟಿನ ಮೇಲೆ ತಿಳುವಳಿಕೆ ಕೊಡುವ ಶ್ರೇಷ್ಟ ಗ್ರಂಥವಿದು "ಸಾಂಖ್ಯದಲ್ಲಿ ಪಂಚಮಹಾ ಭೂತಗಳು ಪಂಚತನ್ಮಾತ್ರಗಳಿಂದ ಸೃಷ್ಠಿಯಾಗಿವೆ" ಆದರೆ ಶಬ್ಧ, ಸ್ಪರ್ಶ, ರೂಪ, ರಸ ಮತ್ತು ಗಂಧದಿಂದ ಪೃಥ್ವಿ, ಅಪ್ಪು, ತೇಜ, ವಾಯು ಆಕಾಶಗಳು ಸೃಷ್ಠಿಯಾಗಿದೆ ಎಂಬ ಸಾಂಖ್ಯದ ಅಭಿಪ್ರಾಯವಾದರೆ, ಕರಣ ಹಸಿಗೆ ಪ್ರಕಾರ ಪಂಚಮಹಾಭೂತಗಳಿಂದಲೇ ಸೃಷ್ಠಿ ಸ್ಥಿತಿಯ ಆರಂಭ" 53 ಎಂಬುದು ಇದರೊಳಗಿದೆ.

- ಕರಣ ಹಸಿಗೆಯಲ್ಲಿ ಪಂಚವಿಂಶತಿ ತತ್ವಗಳು ಪ್ರಮುಖವಾಗಿದೆ.
- ದೇಹ ಸೃಷ್ಟಿ ಅಂಗಾಂಗಗಳ ಪಂಚಮ ಕಾರ್ಯವೈಖರ್ಯದೊಂದಿಗೆ ಗರ್ಭದೊಳಗಿಂದ ಬೆಳವಣಿಗೆ ಹೊಂದುವ ಹಂತದೊಂದಿಗೆ ಭೂಮಿಗೆ ಬಂದು ಬೆಳೆದು ಬದುಕು ಅನುಭವಿಸಿ ಕೃಶವಾಗಿ ಅತ್ಯವಾಗಿ ಪಂಚಭೂತಗಳೊಳಗೆ ಒಂದಾಗುವವರೆಗಿನ ವಿವರಣೆ ಇದೆ.
- ಶೂನ್ಯ ಸ್ಥಿತಿಗೊಂಡು ನಂತರ ಲಿಂಗಾಂಗ ಸಾಮರಸ್ಯ ಹೊಂದುವ ಕೊನೆ ಹಂತ ತಿಳಿಸುವುದು.
- ಆಧ್ಯಾತ್ಮದ ದಾರಿಯಲ್ಲಿ ಶರೀರ ವಿಜ್ಞಾನ ತಿಳಿಸುವುದು.
- ಇಂದಿನ ವೈದ್ಯರ ಕೈಗನ್ನಡಿ 'ಕರಣ ಹಸಿಗೆ' ಯಾಗಿದೆ.

➤ 'ಚರಕ' ಸಂಹಿತೆ ಶುಶ್ರೂತರ ಹೇಳುವ ವಿವರಗಳನ್ನು ಇದರಲ್ಲಿ ಸರಳವಾಗಿ ಶರಣರ ಅನುಭವದಲ್ಲಿ ಹೇಳಿದ್ದಾರೆ.

ದೇವಿ ನಿರ್ಮಿತವಾದ ಮಾನವ ಜೀವಿಯ ಶರೀರ ಮತ್ತು ಆತ್ಮವನ್ನು ಕುರಿತಾದ ಬಗ್ಗೆ ಸಂಪೂರ್ಣ ತಿಳುವಳಿಕೆ ನೀಡಿ, ಜ್ಞಾನಿಯನ್ನಾಗಿ ಮಾಡುವುದು ಕರಣ ಹಸಿಗೆಯ ಕೃತಿಯ ಮಹತ್ತರವಾಗಿದೆ.

ಈ ಆಧುನಿಕ ವೈದ್ಯ ಶಾಸ್ತ್ರದ ಪ್ರಕಾರ ಮೊದಲನೆಯ ವಾರದಲ್ಲಿ ತಂದೆಯ ವೀರ್ಯಾಣು ತಾಯಿಯ ಅಂಡಾಣು (FERTILIZATION) ಕೂಡಿ 8 ರಿಂದ 16 ಸೆಲ್ಸ್ (MORVEL DEVELOPMENT) ಗರ್ಭಕೋಶ ಶೀಲದಲ್ಲಿ ಪ್ರವೇಶವನ್ನು ಪಡೆಯುತ್ತದೆ. ಎರಡನೇಯ ವಾರದಲ್ಲಿ 24 ಗಂಟೆಗಳಲ್ಲಿ ಗರ್ಭಾಣು ಉತ್ಪತ್ತಿಯಾಗಿ 26 ಗಂಟೆಗಳಲ್ಲಿ ಇದರ ಮೊದಲ ವಿಭಜನೆ ಪ್ರಾರಂಭವಾಗುತ್ತದೆ. ಮೂರನೇಯ ವಾರದಲ್ಲಿ ಒಳ ಪದರ , ಹೊರ ಪದರು, ಮಧ್ಯ ಪದರು, ತಾಯಿಯ ಗರ್ಭದಲ್ಲಿ ಮಗುವಿನ ಮಾಂಸ ಪಿಂಡವಾಗಿ ಅಭಿವ್ಯಕ್ತಗೊಳ್ಳುತ್ತದೆ. ನಾಲ್ಕನೆಯ ವಾರದಲ್ಲಿ (NOVER FOLD) ಹಾಗಿ ಭ್ರೂಣ, ಮನುಷ್ಯನ ಆಕಾರ ತೆಗೆದುಕೊಳ್ಳುತ್ತದೆ. ಮೊಗ್ಗ (BUDDA) ತಲೆಯಿಂದ ಪಾದದವರೆಗೆ 4 ರಿಂದ 5 ಮಿಲಿ ಮೀಟರ್ ಗುಷ್ಟಿರುತ್ತವೆ. 5ನೇ ವಾರದಲ್ಲಿ ಕಣ್ಣಿನ ಮಸೂರ (LENCE) ಬಾಯಿ, ಕೈ ಮತ್ತು ಕಾಲಿನ ಬೆರಳುಗಳು , ಕಾಣಲ್ಪಡುತ್ತವೆ. 6ನೇಯ ವಾರದಲ್ಲಿ ಮೇಲುತುಟಿ, ಮೂಗು (PALLET) ಶುರುವಾಗುತ್ತೆ ಶರೀರದ ಬಹು ಮುಖ್ಯವಾದ ಭಾಗವಾಗಿರುತ್ತದೆ. ಇದು ಮೇಲುತುಟಿ ಮತ್ತು ಕೆಳತುಟಿಯ ಮತ್ತು ಮೂಗಿನ ರಚನೆಯಾಗುತ್ತದೆ. ಶರೀರದ ಅಡಿಯಿಂದ ಮುಡಿಯವರೆಗೆ (ಪಾದದಿಂದ ತಲೆಯವರೆಗೆ) 1 ರಿಂದ 23 ಮಿಲಿ ಸೆಂ.ಮೀಟರ್ ಬೆಳವಣಿಗೆ ಹಾಗಿರುತ್ತದೆ. ಏಳನೇಯ ವಾರದಲ್ಲಿ ಕಲ್ಪವೃಕ್ಷದ ಕೆರೆಯಂತಿರುವ ಬೇವಿನ ಎಲೆಯ ಗೆರೆಯಂತಿರುವ , ಕಣ್ಣಿನ ರೆಪ್ಪೆಯ ಅಂಕುರದ ಕೂದಲಗಳು ಪ್ರಾರಂಭವಾಗುತ್ತವೆ. 8ನೇಯ ವಾರದಲ್ಲಿ ಗರ್ಭದಲ್ಲಿರುವ ಶಿಶು ಹೆಣ್ಣು ಅಥವಾ ಗಂಡು ಎಂದು ತಿಳಿಯಲು ಈ ಶಿಶು ಭ್ರೂಣಾ ಅವ್ಯಸ್ಥೆಯಲ್ಲಿ ಕಂಡು ಬರುತ್ತದೆ (EMRIANIC PERIOD) 9ನೇ ವಾರದಿಂದ (PATEL PERIOD) ಈ ಭ್ರೂಣ ತಲೆಯಿಂದ ಪಾದದವರೆಗೆ ವೈದ್ಯಕೀಯ ಮಾಪನದ ಮೂಲಕ 5 ಸೆಂ.ಮೀ. ಇರುತ್ತದೆ. ಈ ಭ್ರೂಣ ಶಿಶುವಿನ ತೂಕ 9 ಗ್ರಾಂ ಇರುತ್ತದೆ. 10ನೇಯ ವಾರದಲ್ಲಿ ಹೆಣ್ಣು ಅಥವಾ ಗಂಡು ಅಂತರ್ ಗರ್ಭದಲ್ಲಿ ಬಹಿರಂಗವಾಗಿ ಗುರುತಿಸಲ್ಪಡುತ್ತದೆ. ಲಿಂಗಾನು ಪಾತಾ ಪತ್ತೆ ಹಚ್ಚುವ ಯಂತ್ರದ ಮೂಲಕ ಈ ವಾರದಲ್ಲಿ ವ್ಯಕ್ತವಾಗುತ್ತದೆ. ಈ ಶಿಶುವಿನ ತೂಕ 460 ಗ್ರಾಂ,ಉದ್ದ 19 ಸೆಂ.ಮೀಟರ್ ಇರುತ್ತದೆ. ಮೂರನೇಯ ತ್ರೈಮಾಸಿಕದಲ್ಲಿ ಈ ಶಿಶುವಿನ ತೂಕ 900 ಗ್ರಾಂ ಮತ್ತು ಉದ್ದ 25 ಸೆಂ.ಮೀಟರ್ ಇಷ್ಟಗಿರುತ್ತದೆ.

28ನೇಯ ವಾರದಲ್ಲಿ ಶಿಶುವಿನ ಕಣ್ಣುಗಳು ತೆರೆದುಕೊಳ್ಳುತ್ತವೆ ಹಾಗೂ ಶಿಶುವಿನ ಅಧಿಕ ಭಾರವಾಗಿ ತಲೆಯ ಭಾಗ ಮೇಲುಗಡೆಯಿಂದ ಕೆಳಗೆ ಬರಲು ಪ್ರಾರಂಭಿಸುತ್ತದೆ.

ಈ ಶಿಶುವಿನ ತೂಕ ಒಂದು ಕೆ.ಜಿ. ಯಷ್ಟಾಗಿರುತ್ತದೆ. ಶ್ವಾಸ ಕೋಶಗಳು ಉತ್ಪತ್ತಿಯಾಗಲು ಪ್ರಾರಂಭಿಸುತ್ತವೆ. ಮೂವತ್ತೆಂಟರಿಂದ ನಲವತ್ತನೇಯ ವಾರಕ್ಕೆ ಶರೀರದ ಎಲ್ಲಾ ಅಂಗಾಂಗಳು ವೃದ್ಧಿಗೊಂಡು ತಾಯಿ ಸೇವಿಸಿದ ಪ್ರತಿಯೊಂದು ಆಹಾರ ಪದಾರ್ಥಗಳಾದ ಉಪ್ಪು, ಹುಳಿ, ಖಾರ, ಸಿಹಿ ಕಹಿ ಎಲ್ಲವನ್ನು ತಾಯಿಯ ಪ್ರಾಸದವು ಹೊಕ್ಕಳಿನ ಬಳ್ಳಿಯ ಮೂಲಕ ಶಿಶುವಿಗೆ ಆಹಾರ ಹೋಗಿ ಪೌಷ್ಠಿಕತೆಯಿಂದ ಕೂಡಿ ಶಿಶು ಸಮೃದ್ಧಿಯಾಗಿ ಬೆಳವಣಿಗೆಗೊಂಡು ನಲವತ್ತೊಂದನೆಯ ವಾರಕ್ಕೆ ತಲೆ ಕೆಳಗಾಗಿ ಆ ಮಗು ಈ ಭೂಲೋಕಕ್ಕ ಸ್ಪರ್ಶವಾಗಿ ಅಳಲು ಪ್ರಾರಂಭಿಸುತ್ತದೆ ಎಂದು ಸಂದರ್ಶನ ಮಾಡಲು ಚಿತ್ರದುರ್ಗ ಮುರುಘರಾಜೇಂದ್ರ ಬೃಹನ್ ಮಠದ ಬಸವೇಶ್ವರ ವೈದ್ಯಕೀಯ ಕಾಲೇಜು ಆಸ್ಪತ್ರೆ ಮತ್ತು ಸಂಶೋಧನಾ ಕೇಂದ್ರದ ಡಾಕ್ಟರ್‌ಗಳಾದ , ಡಾ॥ ನಿತ್ಯಶ್ರೀ ,ಡಾ॥ ಸಂಗಮೇಶ್, ಹಾಗೂ ಡಾ॥ ಆಯುಷ ರವರಿಂದ ಈ ಒಂದು ವಿಷಯದ ಬಗ್ಗೆ ಕೂಲಂಕಶವಾಗಿ ಚರ್ಚಿಸಿ ವಿಷಯವನ್ನು ಪ್ರಸ್ತಾಪಿಸಲಾಗಿದೆ. ಚೆನ್ನಬಸವ ಪುರಾಣದಲ್ಲಿ ವಿರುಪಾಕ್ಷ ಪಂಡಿತರು ಆಯುಷ್ಯ ಬೇದವನ್ನು ಮತ್ತು ಬಾಲಸಂಗಯ್ಯನ ವಚನಗಳು ಆಯುಷ್ಯ ಬೇದವನ್ನು ನೋಡಿದರೆ ಒಂದೇ ಹಾಗಿ ತೋರುತ್ತದೆ ಅಂದರೆ ಸ್ತ್ರೀ-ಪುರುಷರಿಗೆಯೂ " ಸ್ವರ ಐದುಗಳಗೆ ನೆಡೆದಡೆ ಆಯುಷ್ಯ ನೂರು ವರುಷ, ನಾಲ್ಕುಗಳಗೆ ನೆಡೆದಡೆ ಎಂಬತ್ತು ವರುಷ, ಮೂರುಗಳಗೆ ನೆಡೆದಡೆ ಆಯುಷ್ಯ ಅರವತ್ತು ವರುಷ, ಎರಡುಗಳಗೆ ನಡೆದಡೆ ಆಯುಷ್ಯ ನಲವತ್ತು ವರುಷ, ಒಂದುಗಳಗೆ ನೆಡೆದಡೆ ಆಯುಷ್ಯ ಇಪ್ಪತ್ತು ವರುಷ, ಅರೆಗಳಗೆ ನೆಡೆದಡೆ ಆಯುಷ್ಯ ಹತ್ತು ವರುಶ, ಕಾಲುಗಳಗೆ ನಡೆದಡೆ ಆಯುಷ್ಯ ಐದು ವರುಷ, ಇಂತೀ ಕ್ರಮದಿಂದ ನೋಡಿಕೊಂಬುದು ಅಪ್ರಮಾಣ ಕೂಡಲ ಸಂಗಮದೇವಾ, ಎಂದು ಗಂಡು ಹೆಣ್ಣುಗಳ ಸಂಭೋಗದ ಗಳಿಗೆಗಳನ್ನು ಗಪ್ತಿಗೊಳಸುವುದರ ಮೂಲಕ ಪಕ್ವತೆಗೊಂಡ ಅಂಡಾಣು ವೀರ್ಯಾಣು ಹೆಚ್ಚು ಆಯುಷ್ಯವನ್ನು ಪಡೆಯುತ್ತಂದೆ ಉದಾ:- ಬಲಿತ ಬೀಜವು ಭೂಮಿಗೆ ಬಿದ್ದು ಅಂಕುರಗೊಂಡ ಬೃಹದಾಕಾರವಾಗಿ ಮರವಾಗಿ ನಿಲ್ಲುತ್ತದೆ. ಹುಸಿ ಹೊಡೆದ ಬೀಜವು ಸಸಿಯಲ್ಲಿ ಕಮರಿ ಹೋಗುವಂತೆ ಈ ಆಯುಷ್ಯ ಜೀವವನ್ನು ದೇಹ ರಚನಾ ಶಾಸ್ತ್ರದಲ್ಲಿ ಅಂದರೆ ಕರಣ ಹಸಿಗೆಯಲ್ಲಿ ಪರಿಪರಿಯಾಗಿ ವಿವರಿಸಿದ್ದಾರೆ.

೧. ಹೆಣ್ಣು ಅಥವಾ ಗಂಡು ಹೇಗೆ ಹುಟ್ಟುತ್ತದೆ ಎಂದು ತಿಳಿಯುವ ನಕ್ಷೆ :

**CHROMOSOMES :**




೨. ಮಗುವು ನಪುಂಸಕವಾಗಿ ಹೇಗೆ ಪರಿವರ್ತನೆ ಆಗುತ್ತದೆ ಎಂದು ಹೇಳುವ ನಕ್ಷೆ :




**DOMINATE RECURSIVE**



## ಅಡಿ ಟಿಪ್ಪಣಿ

### ಶರಣ ಹಸಿಗೆಯ ದೇಹ ರಚನಾ ಶಾಸ್ತ್ರ

೧) ಡಾ. ಶ್ರೀ ಇಮ್ಮಡಿ ಶಿವಬಸವ ಸ್ವಾಮಿಗಳು, ಕರಣ ಹಸಿಗೆ ಪುಟ ೧೦, ಜಗದ್ಗುರು ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು, ಮು :೨೦೦೧.

೨) ಶ್ರೀ ಮ.ನಿ.ಪ್ರ. ಜಗದ್ಗುರು ಅನ್ನದಾನೀಶ್ವರ ಮಹಾಶಿವಯೊಗಿಗಳವರ ಕರಣ ಹಸಿಗೆ ಅರ್ಥಾತ್ ದೇಹತ್ಮ ವಿಜ್ಞಾನ ಪುಟ ೧೭, ಮುದ್ರಣ : ೨೦೦೫.

೩) ಡಾ. ಶ್ರೀ ಇಮ್ಮಡಿ ಶಿವಬಸವಸ್ವಾಮಿಗಳು, ಸಂ. ಕರಣ ಹಸಿಗೆ ಪುಟ ೧೬, ಜಗದ್ಗುರು ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು.

೪) ಡಾ. ಆರ್.ಸಿ. ಹಿರೇಮಠ ಸಂ. ಚೆನ್ನಬಸವಣ್ಣನವರ ವಚನಗಳು ಇತರ ಸಾಹಿತ್ಯ ಪರಿಶಿಷ್ಟ–೧ (ಕರಣ ಹಸಿಗೆ) ಪುಟ ೬೫೯, ಎಸ್.ಎಸ್. ಒಡೆಯರ್, ರಿಜಿಸ್ಟ್ರಾರ್, ಕವಿವಿ, ಧಾರವಾಡ, ಮು–೧೯೬೫.

೫) ಡಾ. ಬಿ.ವಿ. ಶಿರೂರ ಸ. ಗೌರವ ಲೇಖನ ಪುಟ ೮೨ ರಿಂದ ೮೬ ವೀರಶೈವ ಅಧ್ಯಯನ ಸಂಸ್ಥೆ, ಜಗದ್ಗುರು ತೋಂಟಾದಾರ್ಯ ಸಂಸ್ಥಾನ ಮಠ, ಗದಗ, ಮು–೧೯೮೬.

೬) ಡಾ. ಎಸ್.ವಿ. ಅಯ್ಯನಗೌಡರ "ಮೈಲಾರ ಬಸವಲಿಂಗ ಶರಣರ ಜೀವನ ಮತ್ತು ಸಮಗ್ರ ಕೃತಿಗಳ ದರ್ಶನ" ಪಿ.ಹೆಚ್.ಡಿ. ಮಹಾಪ್ರಬಂಧ ಪುಟ ೨೩೬, ಮು–೧೯೮೩.

೭) ಷಟ್‌ಸ್ಥಲ ಜ್ಞಾನಾಮೃತ ಪದ್ಯ ೬೬.

೮) ಸಮಗ್ರ ವಚನ ಸಾಹಿತ್ಯ ಸಂಪುಟ ೧೩ರ ಬಾಲಸಂಗಯ್ಯನ ಸೃಷ್ಠಿಯ ವಚನ ಅದರ ಮಹತ್ವದ ವಿಷಯ.

೯) ಡಾ. ಬಿ.ವ್ಹಿ. ಮಲ್ಲಾಪುರ ಸಂಪಾದಿಸಿರುವ ಚೆನ್ನಬಸವಣ್ಣ ವಚನ ಸಂಪುಟ ೩ರ ಆವೃತ್ತಿಯಲ್ಲಿ ಕರಣ ಹಸಿಗೆಗೆ ಸಂಬಂಧಿಸಿರುವ ವಚನಗಳ ವಿವರ ಮತ್ತು ವಿಶ್ಲೇಷಣೆ.

## ಕರಣಹಸಿಗೆಯ ಮಹತ್ವ

ಕರಣಹಸಿಗೆಯ ಕರ್ತೃ ಚನ್ನಬಸವಣ್ಣನವರು ಹನ್ನೆರಡನೆಯ ಶತಮಾನದಲ್ಲಿದ್ದ ಅವರ ಇತಿವೃತ್ತವನ್ನು ಕುರಿತು ಈಗಾಗಲೇ ವಿದ್ವಾಂಸರು ಸಾಕಷ್ಟು ಶೋಧನೆಗಳನ್ನು ಪ್ರಕಟಿಸಿರುವುದರಿಂದ ಅವರ ಬಗ್ಗೆ ಪ್ರತ್ಯೇಕವಾಗಿ ಹೇಳಬೇಕಾದ ಅಗತ್ಯವಿಲ್ಲ.

ಕರಣಹಸಿಗೆಯಲ್ಲಿ ನಿರೂಪಿತವಾಗಿರುವ ವಿಷಯಗಳನ್ನು ಒಟ್ಟಾರೆ ಅಭಿನಿವೇಶನವಿಲ್ಲದೆ ಪರೀಶಿಲಿಸಿದಲ್ಲಿ ಅದು ವೀರಶೈವರಿಗಷ್ಟೇ ಮೀಸಲಾದ ಕೃತಿಯೆನಿಸುವುದಿಲ್ಲ. ವೀರಶೈವ ಸಿದ್ಧಾಂತದ ಮೂಲಭೂತ ಪರಿಕಲ್ಪನೆಗಳಾದ ಅಷ್ಟಾವರಣ ಪಂಚಾಚಾರ ಷಟ್‌ಸ್ಥಲಗಳ ಪ್ರಸ್ತಾಪವೇ ಮೂಲಪಠ್ಯದಲ್ಲಿಲ್ಲ ಇದು ಗಮನಿಸಬೇಕಾದ ಸಂಗತಿ ಇದು ಮತೀಯ ಕೃತಿಯಲ್ಲ. ವಾದ ವಿವಾದಗಳ ಕೃತಿಯಲ್ಲ ಮತಸಿದ್ಧಾಂತ ಸ್ಥಾಪನಾಕೃತಿಯಲ್ಲಿ ಇಲ್ಲ. ದ್ವೈತಾದ್ವೈತಗಳ ಚರ್ಚೆಯಿಲ್ಲ ಸರ್ವರಿಗೂ ಅನ್ವಯವಾಗುವ ತಾತ್ವಿಕ ಕೃತಿ ಭಾರತೀಯ ಸನಾತನ (ನಿತ್ಯ ಶಾಶ್ವತ) ಧರ್ಮದ ಸ್ವರೂಪವನ್ನು ಅರಿಯಲು ನೆರವಾಗುವ ಒಂದು ಆಧಾರ ಕೃತಿಯೆನ್ನಬಹುದು. ಇಲ್ಲಿ ನಿರೂಪಿತವಾಗಿರುವ ವಿಷಯಗಳಿಂದ ವೇದ ಉಪನಿಷತ್ತುಗಳು ಆಗಮ ತಂತ್ರಯೋಗ ಪುರಾಣ ಇವುಗಳನ್ನು ಚನ್ನಬಸವಣ್ಣನವರು ತಲಸ್ಪರ್ಶಿಯಾಗಿ ಅಧ್ಯಯನ ಮಾಡಿದ್ದರು ಎಂಬುದು ವಿದಿತವಾಗುತ್ತದೆ. ನಿದರ್ಶನಕ್ಕೆ ಚನ್ನಬಸವಣ್ಣನವರು ವಿಜಯ ಭೈರವಾಗುಮದಿಂದ ಉಲ್ಲೇಖಿಸುವುದನ್ನು ಇಲ್ಲಿ ನೆನೆಯಬಹುದು. ಅಹಂಕಾರ ದಶನಾಡಿ ದಶವಾಯು ಪಂಚೀಕರಣ ತ್ರಿಗುಣಗಳು ತಾಪತ್ರಯ ಮುಂತಾದವುಗಳನ್ನು ತಿಳಿಸುವಲ್ಲಿ ಅತ್ಯಂತ ಪ್ರಾಚೀನವೆನಿಸಿದ ಸಾಂಖ್ಯ ಪದ್ದತಿಗಿಂತ ಸ್ವಲ್ಪ ಭಿನ್ನತೆ ಇರುವುದನ್ನು ಕಾಣಬಹುದು.

ಕರಣಹಸಿಗೆಯಲ್ಲಿ ಉದ್ದತವಾಗಿರುವ ಕೆಲವು ಶ್ಲೋಕಗಳನ್ನು ಗಮನಿಸಿದ್ದಲ್ಲಿ ಆಗಮಗಳನ್ನೇ ಅವಲಂಬಿಸಿದ್ದಾರೆ ಎನ್ನಲು ಅವಕಾಶವಿದೆ. ಅವರೇ ಪಂಚ ಮಹಾಭೂತಗಳ ಪಂಚೀಕರಣದ ಪ್ರತಿಕ್ರಿಯೆಗೆ ಆಧಾರವಾಗಿ ವಿಜಯಭೈರವಿ ಆಗಮವನ್ನು ಉಲ್ಲೇಖಿಸಿದ್ದಾರೆ. ಇದು ಪಾರಮೇಶ್ವರಾಗಮದ ಶಾಖಾಗಮವಾದ ವಿಜಯಭೈರವಿ ಎಂಬ ಶಿವಾಗಮ ಇದರಲ್ಲಿನ ತತ್ವಪಟಲವೆಂಬ ಭಾಗದಿಂದ ಆರಿಸಿಕೊಂಡಿದ್ದಾರೆ ಎಂದು ಪ್ರಸ್ತುತ ವ್ಯಾಖ್ಯಾನಕಾರನು ತಿಳಿಸುತ್ತಾನೆ ಈ ಸೂಚನೆಯನ್ನೇ ಅವಲಂಭಿಸಿ ಇಲ್ಲಿ ಪ್ರಸ್ತಾಪಿತವಾಗಿರುವ ಇನ್ನಿತರ ಶ್ಲೋಕಗಳ ಮೂಲವನ್ನು ಅನ್ವೇಷಿಸಬಹುದಾಗಿದೆ. ಸದ್ಯಕ್ಕೆ ಕರಣಹಸಿಗೆಯ "ಪಂಚ ಭೂತದುತ್ಪತ್ತಿ" ಎಂಬ ಪ್ರಕರಣದಲ್ಲಿ (ಪುಟ ೨೦) ಉದ್ಧರಿಸಿರುವ ಶ್ಲೋಕಗಳನ್ನು ವಾತುಲಾಗಮ, ವಿರಾಮಗಳಿಂದ ತೆಗೆದುಕೊಳ್ಳಲಾಗಿದೆಯೆನ್ನುವುದಕ್ಕೆ ಗ್ರಂಥಾಂತರಗಳಿಂದ ಸಮರ್ಥಿಸಬಹುದಾಗಿದೆ. ಅಂಗಚತುಷ್ಟಯಂಗಳು (ಪುಟ ೧೩೮)

೧. ಅನಾದಿ ವೀರಶೈವ ಸಂಗ್ರಹ : ಸಂ.ಜಿ.ಎಸ್. ಶಿವಲಿಂಗಯ್ಯ ಬಸವ ಸಮಿತಿ ಬೆಂಗಳೂರು ೧೯೬೯ ಪುಟ ೧೮೮.

೨. ವೀರಶೈವ ತತ್ವ ಮತ್ತು ಆಚರಣೆ : ಸಂ.ಡಾ.ಎಲ್ ಬಸವರಾಜು. ಶ್ರೀ ಬೃಹನ್ಮಠ ಸಂಸ್ಥಾನ, ಚಿತ್ರದುರ್ಗ ೧೯೮೨ ಪುಟ ೬೫೨.

ಎಂಬಲ್ಲಿನ ವಿವರಗಳಿಗೆ ಸಂವಾದಿಯಾದ ಶ್ಲೋಕಗಳು ವಾತುಲಾಗಮದಲ್ಲಿ ಬರುತ್ತವೆ. ನಿಸರ್ಗವು ನೀಡಿರುವ ಮಾನವನ ಬುದ್ಧಿ ಶಕ್ತಿಯು ಎರಡು ಸ್ತರಗಳಲ್ಲಿ ತೀವ್ರವಾಗಿ ಆಲೋಚಿಸುತ್ತದೆ. ಮೊದಲನೆಯದಾಗಿ ನಮಗೆ ಇಂದ್ರಿಯಗಳ ಮೂಲಕ ಕಾಣಬರುವ ಬಾಹ್ಯ ಜಗತ್ತಿನ ಪರಿಶೀಲನೆ ಎರಡನೆಯದಾಗಿ ನಮ್ಮ ದೇಹ ಹಾಗೂ ಮನಸ್ಸು ಇವುಗಳಲ್ಲಿ ಅಂತರ್ಗತವಾಗಿರುವ ಅತ್ಯದ್ಭುತವಾದ ಚೈತನ್ಯ ಶಕ್ತಿಯ ಚಿಂತನೆ, ಈ ಎರಡರ ಉದ್ದೇಶವೂ ಪರಮ ಸತ್ಯವನ್ನು ಅರಿಯುವುದು ಈ ಅನ್ವೇಷಣೆಯಲ್ಲಿ ಕಂಡ ಬಾಹ್ಯ ಜಗತ್ತನ್ನು ಬ್ರಹ್ಮಾಂಡವೆಂದು (Macrocosm) ಅಂತರಂಗದೊಳಗಿರುವ ಜಗತ್ತನ್ನು ಪಿಂಡಾಂಡವೆಂದು (Microcosm) ಪಾರಿಭಾಷಿಕವಾಗಿ ವೇದಾಂತಿಗಳು ಕರೆದಿದ್ದಾರೆ. ಇವೆರೆಡರ ವಿಶ್ಲೇಷಣೆಯನ್ನು ಪ್ರಾಚೀನರು ಹೇಗೆ ಚಿಂತಿಸಿದರು ಎಂಬುದನ್ನು ಸಂಕ್ಷೇಪವಾಗಿ ಆಧಾರಸಮೇತ ಸೂತ್ರ ರೂಪದಲ್ಲಿ ಕರಣಹಸಿಗೆಯಲ್ಲಿ ಚನ್ನಬಸವಣ್ಣನವರು ನಿರೂಪಿಸಿದ್ದಾರೆ. ಮಾನವನು ಅಮೃತತ್ವವನ್ನು ಪಡೆಯಬೇಕಾದರೆ ತನ್ನ ಅಂತರಂಗದ ಕಡೆ ಪಯಣಿಸಬೇಕು, ಈ ದಿಸೆಯಲ್ಲಿ ಇದು ಆಧ್ಯಾತ್ಮದ ಶ್ರೀ ಗಿರಿಯ ಶಿಖರವನ್ನೇರುವ ಸೋಪಾನವಾಗಿದೆ.

ಅಷ್ಟ ವರಣವೇ ಅಂಗ, ಪಂಚ ಆಚಾರವೇ ಪ್ರಾಣ, ಷಟಸ್ಥಲವೇ ಆರ್ತ ಸರ್ವಜ್ಞಾನವು ಪರಿಯಾಗಿ ೩೬ ವಿಷಯಂಗಳು ಪ್ರಾಣಲಿಂಗದಲ್ಲಿ ಕೂಡಿದ ಮಹತ್ವವನ್ನು ಇಂದ್ರಿಯೆಂಗಳು ಸೋಂಕುವುದು ಅಂದರೆ ತಟ್ಟುವುದು, ತಟ್ಟುವುದನ್ನು ತಿಳಿಯುವುದು, ತಿಳಿದಿದ್ದನ್ನು ನಿಶ್ಚಯಿಸುವುದು, ನಿಶ್ಚಯಿಸಿದ್ದನ್ನು ಸುಖಿಸುವುದು, ಸುಖಿಸುವುದನ್ನು ಪರಿಣಮಿಸುವುದು, ಪರಿಣಮಿಸಿದ್ದನ್ನು ಆನಂದಿಸುವುದು, ಆಯಾ ಕ್ರಿಯೆಗಳಿಗೆ ಬೇಕಾಗುವ ಅವಧಿಯನ್ನು, ಆಯಾಲಿಂಗಾಂಗಗಳಿಗೆ ಅರ್ಪಿಸುವುದು, ಅವು ಆತ್ಮಸಂಬಂಧವಾದುದ್ದರಿಂದ ಭಾವಲಿಂಗಕ್ಕೆ ಅರ್ಪಿಸಬೇಕು. ೩೬ ಪದಾರ್ಥ ಅರ್ಪಿತ ಕರಣಹಸಿಗೆಯ ತತ್ವಗಳನ್ನು ನಿರೂಪಿಸುವ ಒಂದು ಸಂಕ್ಷೇಪ ರೂಪದ ಕೃತಿ ಇದರಲ್ಲಿ ಬರುವ ವಸ್ತು ಪಾರಿಭಾಷಿಕ ಶಬ್ದಗಳಿಂದ ಕೂಡಿದ್ದು ಗಹನವೂ ಗೂಢವೂ ವ್ಯಾಪಕವೂ ಆಗಿದೆ. ಇವನ್ನು ಪ್ರಸ್ತುತ ವ್ಯಾಖ್ಯಾನಕಾರ ಚೆನ್ನಾಗಿ ಮನಗಂಡಿದ್ದಾನೆ. ಆದ್ದರಿಂದಲೇ ಇದಕ್ಕೆ ಸ್ಪಷ್ಟವೂ ವಿಸ್ತೃತವೂ ಹಾಗೂ ಸರಳವೂ ಆದ ವಿವರಣೆಯನ್ನು ಗುರು–ಶಿಷ್ಯ ಸಂಭಾಷಣಾ ರೂಪದಲ್ಲಿ ಆತ ನೀಡಿದ್ದಾನೆ ಇದರಿಂದ ವ್ಯಾಖ್ಯಾನಕ್ಕೆ ಒಂದು ಬಗೆಯ ಸಂವಾದದ ಪರಿವೇಷ ಪ್ರಾಪ್ತವಾಗಿದೆ. ಹೀಗೆ ಮಾಡುವಾಗ ಆತ ಮೂಲದ ಪದಗಳಿಗೆ ಸಂವಾದಿಯಾದ ಅರ್ಥ ನೀಡಿ ಅಗತ್ಯವಿದ್ದೆ ಕಡೆಗಳಲ್ಲಿ ವಿವರವಾದ ನಿರೂಪಣೆ ಕೊಟ್ಟಿದ್ದಾನೆ. ಇದು ಹೇಗೆಂದರೆ ಒಂದೇ ವಿಷಯವನ್ನು ವಿವರಿಸಲು ನಾಲ್ಕಾರು ಹೋಲಿಕೆ ದೃಷ್ಟಾಂತ ನಿದರ್ಶನಗಳನ್ನು ಕೊಡುವುದು ವಿಷಯ ಸ್ಪಷ್ಟೀಕರಣಕ್ಕೆ ಮನಮುಟ್ಟುವ ಸರಸಾಕರ್ಷಕ ಶೈಲಿಯನ್ನು ಬಳಸುವುದು. ಸಂಸ್ಕೃತ ಹಾಗೂ ತತ್ವ ಶಾಸ್ತ್ರಗಳ ಆಳವಾದ ಪರಿಚಯವಿರದ ಸಾಮಾನ್ಯರಿಗೂ ಸುಲಭಗಮ್ಯವಾಗುವ ರೀತಿಯಲ್ಲಿ ವ್ಯಾಖ್ಯಾನ ರಚನೆಗೊಂಡಿದೆ. ಅಲ್ಲಲ್ಲಿ ಸರಸವೂ ವಿನೋದಪೂರ್ಣವೂ ಆದ ದೃಷ್ಟಾಂತಗಳಿಂದ ವಸ್ತುವಿನ ಬಿಗುವನ್ನು ಸಡಿಲಿಸಿ ಮನಸ್ಸಿಗೆ ನಾಟುವಂತೆ ವ್ಯಾಖ್ಯಾನ ಮಾಡುತ್ತಾ ಹೋಗಿದ್ದಾನೆ. ಸಾಮಾನ್ಯವಾಗಿ ಅಧ್ಯಾತ್ಮಿಕ ಕೃತಿಗಳಲ್ಲಿ ಮತ್ತು ಅವುಗಳ ವ್ಯಾಖ್ಯಾನಗಳಲ್ಲಿ ಕಂಡುಬರುವ ಶಾಸ್ತ್ರದ ಪೆಡಸು ಸೂಕ್ಷ್ಮ ತಾರ್ಕಿಕತೆ ಇಲ್ಲಿಲ್ಲದಿರುವುದು ಒಂದು ವಿಶೇಷತೆ, ಇದಕ್ಕೆ ಕೆಲವು ನಿದರ್ಶನಗಳು.

ಸಂಗ್ರಹವಾಗಿ:- ಆ ಲೋಕದಲ್ಲಿ ಅಕ್ಷರವಡಗಿದ ಹಾಗೇ ಅಕ್ಷರದಲ್ಲಿ ಅರ್ಥವಡಗಿರುವ ಹಾಗೇ ಹೋಗಲು ಭಾಜನದಲ್ಲಿ ಸಕಲ ಸಾಧನ ದ್ರವ್ಯಂಗಳಡಗಿರುವ ಹಾಗೇ ಅಂಗಿ ಅರಚಾಪೆಗಳಲ್ಲಿ ಅವಯವಗಳಡಗಿರುವ ಹಾಗೇ ಕಣಜ ಪಣತಾದಿಗಳಲ್ಲಿ ಹದಿನೆಂಟು ಧಾನ್ಯಾದಿಗಳಡಗಿರುವ ಹಾಗೇ ಬತ್ತಳಿಕೆಯಲ್ಲಿ ಅಂಬುಗಳಡಗಿರುವ ಹಾಗೇ ತೋರಿಶೆಟ್ಟಿಯ ಹೆಗಳ ಹಸುವೆಯಲ್ಲಿ ಗಂಧಕ ದ್ರವ್ಯಗಳಡಗಿರುವ ಹಾಗೇ ಅಡಗಲ್ಪಟ್ಟವಾಗಿ

ತೋರ್ಪುದು:- ಪಿಂಡಮರ್ಯಾದೆಯಲ್ಲಿ ನೋಡಿದರೆ ಕಾಣಬಾರದು (ಪುಟ ೪೩) ನಿದ್ರೆ: ಬೆಕ್ಕ ಕಂಡ ಇಲಿಯೋಪಾದಿಯಲ್ಲಿ ಅನ್ನೋದಕಂಗಳ ಯಥೇಚ್ಛವಾಗಿ ತೆಗೆದುಕೊಂಡು ಒಂದಾನೊಂದು ಹೂಡಿಬಿಟ್ಟ ಕುಂಡೆಯದಿಂಡಿನ ಹಾಗೇ ತರಿದು ಕೆಡವಿದ ಸ್ಥಾಣುವಿನ ಹಾಗೇ ಚೌಳ ಹೇರ ಕೆಡಹಿದ ಕೋಣನಹಗೇ ತುರುಕರ ಮನೆಯ ಹೆಣದ ಹಾಗೇ ದಿವಾಕಾಲ ನಿಶಾಕಾಲಂಗಳಲ್ಲಿ ವಡಗಡೆದು ಮಲಗಿರುವಂಥ ದೇಹದ ಅತಿಜಾಯೆಯು (ಪುಟ ೪೬)

ಒಂದಾನೊಂದು ಕಡಿವಂಥ ಕೊಡಲಿ ಕೊಯ್ಯುವಂಥ ಕುಡುಗೋಲು ಕುಟ್ಟುವಂಥ ಒನಕೆ ಬೀಸುವಂಥ ಕಲ್ಲು ಕೇರುವಂಥ ಮೊರ ಮುಂತಾದ ವಸ್ತುಗಳು ಒಬ್ಬಾನೊಬ್ಬ ಆತ್ಮಾಧೀನದಿಂದಲ್ಲದೆ ಸ್ವಯಾಧೀನದಿಂದ ಚೇಕ್ಷಿಸಲರಿಯವು ಇವುಗಳು ತಮ್ಮ ತಮ್ಮ ಸಂಬಂಧವಾದ ವಿಷಯಗಳನ್ನು ಮನಸಾಧೀನದೊಡನೆ ಕೂಡಿಕೊಂಡು ವಾಯುವಿನ ಚೈತನ್ಯ ಬಲದಿಂದಲೇ ಗ್ರಹಿಸುತಿಹುದಾದ ಕಾರಣ ಇವಕ್ಕೆ ಕ್ರಿಯಾರೂಪ ಮಾದ ಪಂಚಹೃಕ್ಷೀಕಾಗಳೆಂಬ ನಾಮವು ಪ್ರಸಿದ್ಧವಾಯಿತು. (ಪುಟ ೩೦).

ಕ್ರೋದಿನಿ:- ನೀವು ಅಪ್ಪಂತ ಭಕ್ತಮಹೇಶ್ವರರ ಮಕ್ಕಳು, ಅಪ್ಪಂತ ಗುರು ಹಿರಿಯರುಗಳ ಶಿಷ್ಯರು, ನಿಮಗೆ ಇಂತ ನಡವಳಿ ಒಳಿತೇ? ಎಂದು ಆರಾದರೂ ಸತ್ಪುರುಷರು ಮಾನ್ಯರು ನೀತಿವಂತರು ಒಂದು ನಡವಳಿಯ ಹೇಳಿದರೆ ನಾನು ಸಕಲ ಭೇದವನ್ನು ಭೇದುಗಳ ಬಲ್ಲಾತನು ಮೀನಮರಿಗೆ ಈಜು ಕಲಿಸುವ ಹಾಗೇ ಎರಳೆಯ ಮರಿಗೆ ಹಾರಿಕೆಯ ಕಲಿಸುವ ಹಾಗೇ ಆರು ಹಡೆದವಳಿಗೆ ಮೂರು ಹಡೆದವಳು ಮುಲುಕು ಕಲಿಸುವ ಹಾಗೇ ತಾಯಸುದ್ದಿಯ ಸಹೋದರರ ಕೂಡಿ ಹೇಳಿದ ಹಾಗೇ ಅಜ್ಜಿಗೆ ಮೊಮ್ಮಗಳು ಕೆಮ್ಮು ಕಲಿಸಿದ ಹಾಗೇ ಬೇರೆ ಬಲ್ಲವರ ಮುಂದೆ ಎಲೆತೊಟ್ಟನ್ನು ತೋರಿಸುವ ಹಾಗೇ ನಮಗೆ ನೀನು ಮೇಲು ಬುದ್ದಿಯ ಹೇಳುವಾತನೇ? ಎಂದು ತೊಡೆಯ ಚಚ್ಚಳಿಸುತ್ತಾ ಮೀಸೆಯ ಕುಣಿಸುತ್ತಾ ಭುಜವ ಬಾರಿಸುತ್ತಾ ಒಂದಾನೊಂದು ಉಗ್ರ ಮುನಿಯೋಪಾದಿಯಲ್ಲಿ ಕಲಹಕ್ಕೆ ಕಾಲ ಕೆದರುತ್ತಾ ಅವರ ಮೇಲೆ ಕಟ್ಟುಗ್ರದ ಕಡುಕೋಪದ ಮುಂದುಗೊಂಡು ಕೊಂದೆನು ತಿಂದೆನು ಎಂಬಂತಾದ್ದೇ ಕ್ರೋಧಿನಿ ಎಂಬ ಮದ (ಪುಟ ೬೭-೬೩)

ತನ್ನ ಸುಗುಣಾನಂದ ಲೀತಿಗೊದಗಿದಂಥದ್ದೇ ಚಿತ್ತು. ಆ ಚಿತ್ತಿನ ವಿಲಾಸದಿಂದ ತಾನೇ ಆ ನಿಃಕಲಲಿಂಗವು. ಆ ಚಿತ್ತಿನ ಚಿನ್ನಾದವೇ ಸುದಾನ. ಆ ಚಿತ್ತುವಿನ ಚಿದ್ಬಿಂದುವೇ ಬಿಂದುಪ್ರಕಾಶ. ಆ ಚಿತ್ತುವಿನ ಚಿತ್ಕಳೆಯೇ ಪ್ರಕಾಶ ತೇಜೋಮೂರ್ತಿ ಈ ಚಿನ್ನಾದ ಚಿದ್ಬಿಂದು ಚಿತ್ಕಳೆ ಮಾಲಚಿತ್ತೆಂಬ ಚತುರ್ವಿಧವು ಘಟ್ಟಿಗೊಂಡು ಅಖಂಡ ಗೋಳಕಾಕಾರ ತೇಜೋಮೂರ್ತಿಯಾಗಿ ನಿಂದು ಮಹಾಲಿಂಗವೆನಿಸಿತು. ಇಲ್ಲಿಗೆ ಮಹಾಲಿಂಗಸ್ಥಲವು.

ಆ ಪರಿಪೂರ್ಣ ಪರಂಜ್ಯೋತಿ ಸ್ತಂಭಾಕಾರವಾದ ಮಹಾಲಿಂಗವು ತಾನೊಂದೇ ಕರ್ಮಸಾದಾಖ್ಯ ಕರ್ತೃಸಾದಾಖ್ಯ ಮೂರ್ತಿ ಸಾದಾಖ್ಯ ಶಿವಸಾದಾಖ್ಯವೆಂಬುದು ಸಾದಾಖ್ಯ ಲಿಂಗರೂಪವ ತಳೆಯಿತೇ ಕರ್ಮ ಸಾದಾಖ್ಯವೇ ಆಚಾರಲಿಂಗದ ಪ್ರಕಾಶ ಕರ್ತೃ ಸಾದಾಖ್ಯವೇ ಗುರುಲಿಂಗಪ್ರಕಾಶ ಮೂರ್ತಿ ಸಾದಾಖ್ಯವೇ ಶಿವಲಿಂಗ ಪ್ರಕಾಶ ಅಮೂರ್ತಿ ಸಾದಾಖ್ಯವೇ ಜಂಗಮಲಿಂಗ ಪ್ರಕಾಶ ಶಿವಸಾದಾಖ್ಯವೇ ಪ್ರಸಾದಲಿಂಗಪ್ರಕಾಶ ಸ್ವರೂಪವ ತಳೆಯಿತು. ಈ ಐದು ಲಿಂಗದ ಬೆಳಗೇ ಪಂಚಮುಖವೆಂದೆನಿಸಿತು.

ಆಚಾರಲಿಂಗ ಪ್ರಕಾಶವೇ ಸದ್ಯೋಜಾತಮುಖಿ ಗುರುಲಿಂಗ ಪ್ರಕಾಶವೇ ವಾಮದೇವಮುಖ ಶಿವಲಿಂಗ ಪ್ರಕಾಶವೇ ಅಘೋರ ಮುಖ ಜಂಗಮಲಿಂಗ ಪ್ರಕಾಶವೇ ತತ್ಪುರುಷ ಮುಖ ಪ್ರಸಾದಲಿಂಗ ಪ್ರಕಾಶವೇ ಈಗಾಗ ಮುಖಿ ಇವುಗಳ ಸ್ವರೂಪವನ್ನು ತಳೆಯಿತು.

ಆ ಪಂಚ ಮುಖದಿಂದಲೇ ಪಂಚಾಕ್ಷರಗಳು ತ್ಪತ್ತಿ ಎಂಬಲ್ಲಿ ಸದ್ಯೋಜಾತ ಮುಖದಿಂದ ನಕಾರ ಪ್ರಣಮವು ವಾಮದೇವ ಮುಖದಿಂದ ಮಕಾರ ಪ್ರಣಮವು ಅಘೋರ ಮುಖದಿಂದ ಶಿಕಾರ ಪ್ರಣಾಮವು ತತ್ಪುರುಷ ಮುಖದಿಂದ ವಕಾರ ಪ್ರಣಮವು ಈಶಾನ ಮುಖದಿಂದ ಯಕಾರ ಪ್ರಣಮವು ಹುಟ್ಟಿದವು.

ಆ ಪಂಚಾಕ್ಷರಂಗಳೆಂದರೆ ಪಂಚಕಲೆಗಳುತ್ಪತ್ತಿಯು ಎಂಬಲ್ಲಿ ನಕಾರ ಪ್ರಣಮದಿಂದ ನಿವೃತ್ತಿಕಲೆ ಮಕಾರ ಪ್ರಣಮದಿಂದ ಪ್ರತಿಷ್ಠಾಕಲೆ ಶಿಕಾರ ಪ್ರಣಮದಿಂದ ವಿದ್ಯಾಕಲೆ ವಕಾರ ಪ್ರಣಮದಿಂದ ಶಾಂತಿಕಲೆ ಯಕಾರ ಪ್ರಣಮದಿಂದ ಶಾಂಶ್ಯಾತೀಕಲೆ ಹುಚ್ಚಿದವು.

ಆ ಪಂಚಕಲೆಗಳಿಂದಲೇ ಪಂಚಶಕ್ತಿಗಳುತ್ಪತ್ತಿ ಅದು ಹೇಗೆ? ನಿವೃತಿತ ವತಿಯಿಂದ ಕ್ರಿಯಾಶಕ್ತಿ ಪ್ರತಿಷ್ಠಾಕಲೆಯಿಂದ ಜ್ಞಾನಶಕ್ತಿ ವಿದ್ಯಾಕಲೆಯಿಂದ ಇಚ್ಛಾಶಕ್ತಿ ಶಾಂತಿಕಲೆಯಿಂದ ಆದಿಶಕ್ತಿ ಶಾಂತ್ಯಾತೀತ ಕಲೆಯಿಂದ ಪರಾಶಕ್ತಿಯು ಹುಟ್ಟಿದವು.

ಪುಣ್ಯೇನಾಪ್ನೋತಿ ದೇವತ್ವಂ ಪಾಪೈಃ ಸ್ಥಾವರಮೇವ ಚ।
ಪುಣ್ಯ ಪಾಪಸಮಾನೇಭ್ಯೋ ಲಭತೇ ಜನ್ಮ ಮಾನುಷ ಮ॥

ಎಂದು ಹೇಳುತಿಹುದಾದ ಕಾರಣ, ಪುಣ್ಯದಿಂದ ದೇವತಾ ಜನ್ಮ ಪಾಪದಿಂದ ಸ್ಥಾವರ ಜನ್ಮ ಪುಣ್ಯಪಾಪಂಗಳ ಸಮಾನತತ್ವದಿಂದ ಮಾನುಷಜನ್ಮ ಮಾನುಷಜನ್ಮ ಮಾನುಷಜನ್ಮ ಸಂಬಂಧಿಯಾದ ಆತ್ಮನ ಸ್ಥೂಲವಲ್ಲದ ಸೂಕ್ಷ್ಮ ವಲ್ಲದ ಪ್ರಮಾಣವಾದ ದೇಹದಲ್ಲಿ ಆರು ಬಳ ರಕ್ತ ಆರುಮಾನ ಶ್ಲೇಷ್ಮ ಮಾರು ಮಾನ ಪಿತ್ತ ಒಂದು ಸೊಲಗೆ ಶುಕ್ಲದಿಂದೊಪ್ಪುತ್ತಿಹುದು ಮತ್ತು ಆ ವೇದದಲ್ಲಿ ಅರವತ್ತಾರು ಕೋಟಿ ಕರಣಂಗಳು ಮುವತ್ಮೂರು ಕೋಟಿ ಇಂದ್ರಿಯಗಳು ಎಪ್ಪತ್ತೆರಡು ಸಾವಿರ ನಾಡಿಗಳು ಎಂಟು ಸಾವಿರ ಸಂದುಗಳಿಂದೊಪ್ಪುತ್ತಿಹುದು. ಆ ದೇಹದಲ್ಲಿ ಮುವತ್ತೆರಡು ಮೊಳ ಕರಳುಗಳು ಮುವತ್ತೆರಡು ದಂತಪಂಜಿಗಳಿಂದೊಪ್ಪುತ್ತಿಹುದು.

ಆ ದೇಹದ ಬಹಿರ್ವಳಯದಲ್ಲಿ ಎಂಟು ಕೋಟಿ ರೋಮರಾಜಿಗಳಿಂದೊಪ್ಪುತ್ತಿಹುದು ಆದೇಹದಲ್ಲಿರುವ ಸಕಲ ತತ್ವಂಗಳನ್ನು ಬೇರೆ ಬೇರೆ ಹಸಿಗೆಯಂ ಮಾಡಿ ವಿಸ್ತರಿಸಿ ಹೇಳುತ್ತಿರುವ

ಕಾರಣ, ಈ ಶಾಸ್ತ್ರಕ್ಕೆ ತತ್ತ್ವ ವಿಭಾಗವೆಂಬ ಅಭಿದಾನ ಪ್ರಸಿದ್ಧವಾಯಿತು. ಇದು ಕರಣಹಸಿಗೆಯೆಂಬ ಶಬ್ಧಕ್ಕರ್ಥವು

ಎನ್ನ ಪರಮೇಶ್ವರನ ಕುಮಾರನಾದ ಷಣ್ಮುಖ ಸ್ವಾಮಿಗಳೇ ಕಕ್ಕಯ್ಯಗಳ ಪ್ರಸಾದ ಸ್ವರೂಪಿನಿಂದ ಅಕ್ಕ ನಾಗಲಾಂಬಿಕೆಯೆಂಬ ಚಿಚ್ಛಕ್ತಿಯ ಚಿದ್ಗರ್ಭದಲ್ಲಿ ಹುಟ್ಟುತ್ತಲೇ ಮರುಗದ ಗಿಡದೋಪಾದಿಯಲ್ಲಿ ಭಕ್ತಿ ಜ್ಞಾನ ವೈರಾಗ್ಯ ವಿಡಿದಾಚರಿ ಸುವ ಸುರುಚಿರ ಪಿಂಡಾದಿ ಜ್ಞಾನ ಶೂನ್ಯಾಂತಮಾದ ಸ್ತರ್ವಾಚಾರಸಂಪನ್ನನಾದ ಪರಮ ವೀರಶೈವ ಷಟ್ಸ್ಥಲ ಜ್ಞಾನಕೋವಿದ ಚಕ್ರವರ್ತಿಯಷ್ವೇ ಚಿಕ್ಕಡಣಾಯಕನೆಂಬ ಮಹಾನುಭಾವನ ದಿವ್ಯಕಾಂತಿ ಮೂರ್ತಿಯೆಂಬುದೀಗ ಚನ್ನಬಸವೇಶ್ವರ ದೇವರು ಶ್ರೀಮತ್ಪರಮೇಶ್ವರನ ಕುಮಾರರಾದ ಷಣ್ಮುಖ ಸ್ವಾಮಿಗಳೇ ಕಕ್ಕಯ್ಯಗಳ ಪ್ರಸಾದ ಸ್ವರೂಪಿನಿಂದೆ ಒಬ್ಬಾಳಿಯಾಗಿ ಅಕ್ಕ ನಾಗಲಾಂಬಿಕೆಯೆಂಬ ಚಿಚ್ಛಕ್ತಿಯಚಿದ್ಗರ್ಭದಲ್ಲಿ ಭೂಮಿಯ ಮಧ್ಯದಲ್ಲಿ ಸ್ವಯಂಭುಲಿಂಗ ಉದಯವಾದ ಹಾಗೇ ಮಲಯಾಚಲದಲ್ಲಿ ಚಂದನದ ಮರ ಉದಯಿಸಿದ ಹಾಗೇ ಮುಗಿಲ ಮರೆಯಲ್ಲಿ ಚಂದ್ರನುದಯವಾದ ಹಾಗೇ ಹುಟ್ಟು ತತೀ ಮರುಗದ ಗಿಡದೋಪಾದಿಯಲ್ಲಿ ತನಗೆ ತಾನೇ ಪರಿಮಳ ಒದಗುವ ಹಾಗೇ ಭಕ್ತಿ ಜ್ಞಾನ ವೈರಾಗ್ಯಾನುಯೋಗಾನು ಸಾರದಿಂದ ದುಃಖಾಶ್ರಯ ಸಂಸಾರವಂ ವಿಲಂಬಿಸುತ್ತೆ ತ್ರಿವಿಧ ಲಿಂಗ ಭಕ್ತಿಯಲ್ಲಿ ಭಕ್ತಿಯುತರ್ಗೆ ಪ್ರಕಟಿಸಿಕೊಡುತ್ತೆ ಭ್ರಾಂತಿ ಭ್ರಮೆಗಳಂ ಕೆಡಮೆಟ್ಟುತ್ತೆ ಷಡುಸ್ಥಲ ಜ್ಞಾನಕೋವಿದ ಚಕ್ರವರ್ತಿಗಳಾಗಿ ಸೊಗಯಿಪ ಶಿವಸುಖಭೋಗಿ ಘನಲಿಂಗಯೋಗಿ ಚಿಕ್ಕಪಣಾಯಕರೆಂಬ ಮಹಾನುಭಾವನ ದಿವ್ಯ ಕಾಂತಿಯ ಚನ್ನಿಗತನದ ತ್ರಿವಿದಪುಣ್ಯ ವಾಹ್ವಯ ಚಿದಬ್ರಹ್ಮಾಂಡ ತಾಂಡವಾಡಂಬರ ಲಿಂಗೋದ್ಧರಣಮಲ ವಿಚಕ್ಷಣಾನುಗ್ರಹಮಂ ಶಿವಣಸಮಯ ಪರಿಪಾಲ ಪರಮಾರಾಧ್ಯ ಶ್ರೀಗುರು ಬಸವರಾಜದೇವರಿಂಪಡೆದು, ಬಸವೇಶ್ವರ ಕುಲದಲ್ಲಿ ಸರಂಗೊಳಿಸಿನಿಂದೊಪ್ಪುವ ಲಿಂಗಮೂರ್ತಿಗಳು ಹಾಲುಕ್ಕಿ ಮೇಲುವರಿಯೋಪಾದಿಯಲ್ಲಿ ತಮ್ಮಂತರಂಗದೊಳು ಹುಟ್ಟಿದ ಸ್ವಾಕ್ಕಜ್ಞಾನ ಉತ್ಕರಿಸಿ ತಮ್ಮ ಚಿತ್ತಿನ ಚಿದಂಗಸ್ವರೂಪವಂ ಜ್ಞಾನಿಗಳೆಂದು ಆನಂದಿಕ್ಷಿ ಮುಕ್ತಿ ಯನ್ನೈದಲೆಂದು ನಿತ್ಯಾ ನಿತ್ಯವಸ್ತುವಿವೇಕ ಇಹಾಮುತ್ರಾರ್ಥ ಫಲಭೋಗ ವಿರಾಗ ಶಮಾದಿ ಷಟ್ಟ ಸಂಪತ್ತಿ ಮುಮುಕ್ಷುತ್ವವೆಂಬ ಸಾಧನ ಚತುಷ್ಟಯು ಸಂಪನ್ನರಾದ ಸಕಲ ಶಿವಶರಣರು ಅಂದು ಆಚರಿಸಿ ಕೃತಾರ್ಥರಾಗಲೆಂದು ಅನ್ಯೋಪ ದೇಶವಾಗಿ ಉಪದೇಶಿಸುತ್ತಿಹರು.

ಸರ್ವಾಚಾರ ಸಂಪತ್ತಿನ ಆಚರಣೆ ವಿಡಿದು ಆಚರಿಸುವಂಥ ನೂತನ ಪುರಾತನರೇ ಸಾಧ್ಯ ಗಣಂಗಳೆನಿಸುವರು. ಇವರು ಮೊದಲಾದ ಪಟ್ಸ್ಥಲಬ್ರಹ್ಮಿಗಳ ಷಡಾಧಾರ ಚಕ್ರದ ಕಂಜದಲ್ಲಿ ಅಷ್ಟವಿಧ ಸಕಿಲುಂಗಳಿಂದ ನೆಲೆಗೊಂಡಿಪ್ಪದುಂಟು ಅದು ಹೇಗೆ ಎಲೆಸ್ವಾಮಿ ಎಂದು ಬೆಸಗೊಂಡೆದೆ ಶ್ರೀ ಎಂಬ ಪ್ರಣಮವೇ ಬಸವೇಶ್ವರ ಸ್ವಾಮಿಗಳ ಹಾಗೆ ಭಕ್ತಿಸ್ಥಲವುಳ್ಳವರುಗಳ ಆಧಾರಚಕ್ರದ ನಾಲ್ಕೆಸಳ ಕಂಜದ ಮಧ್ಯದಲ್ಲಿ ಭಕ್ತನಾಭ ಅಂಗ ಆಚಾರವೆಂಬ ಲಿಂಗ ಕ್ರಿಯೆ ಎಂಬ ಶಕ್ತಿ ಶ್ರದ್ದೆ ಎಂಬ ಭಕ್ತಿ ಸುಚಿತ್ತವೆಂಬ ಹಸ್ತ ಪ್ರಾಣವೆಂಬ ಮುಖ ಸುಗಂಧವೆಂಬ ಪದಾರ್ಥ ಪ್ರಸನ್ನ ಪ್ರಸಾದಸ್ವರೂಪಿನಿಂದ ನೆಲೆಗೊಂಡಿಪ್ಪುದೆಂಬುದೀಗ– ಶ್ರೀ

ಗುರು:– ಎಂಬ ಪ್ರಣಮದಲ್ಲಿ ವಿಗ್ರಹಾರ್ಥ ಹೇಗಯ್ಯಾ ಎಂಬಲ್ಲಿ ಮಡಿವಾಳಯ್ಯಗಳೋಪಾದಿಯಲ್ಲಿ ಮಹೇಶ್ವರಸ್ಥಲವುಳ್ಳವಿರುಗಳ ಸ್ವಾದಿಷ್ಠಾ ನಚಕ್ರದ ಆರೆಸಳ

ಕಂಜದ ಮಧ್ಯದಲ್ಲಿ ಮಹೇಶ್ವರನೆಂಬ ಅಂಗ ಗುರುವೆಂಬ ಲಿಂಗ ಜ್ಞಾನವೆಂಬಶಕ್ತಿನೈಷ್ಠೆ ಎಂಬ ಶಕ್ತಿ ಸುಬುದ್ಧಿ ಎಂಬ ಹಸ್ತ ಜಿಹ್ವೆಯೆಂಬ ಮುಖ ಸುರಳಸವೆಂಬ ಪದಾರ್ಥ ಪ್ರಸನ್ನ ಪ್ರಸಾದ ಸ್ವರೂಪಿನಿಂದ ನೆಲೆಗೊಂಡಿಪ್ಪುದೆಂಬುದೀಗ ಗುರು.

'ಬ' ಎಂಬ ಪ್ರಣಮದಲ್ಲಿ ವಿಗ್ರಹಾರ್ಥವೇನಯ್ಯಾ ಎಂಬಲ್ಲಿ ಬಿಬ್ಬಿ ಬಾಚಯ್ಯಂಗಳೋಪಾದಿಯಲ್ಲಿ ಪ್ರಸಾದಿಸ್ಥಲವುಳ್ಳವರುಗಳ ಮಣಿಪೂರಕ ಚಕ್ರದ ಹತ್ತೆಸಳ ಕಂಜದ ಮಧ್ಯದಲ್ಲಿ ಪ್ರಸಾದಿಯೆಂಬ ಅಂಗ ಶಿವನೆಂಬ ಲಿಂಗ ಇಚ್ಛೆಯೆಂಬ ಶಕ್ತಿ ಸಾವಧಾನವೆಂಬ ಭಕ್ತಿ ನಿರಹಂಕಾರವೆಂಬ ಹಸ್ತ ನೇತ್ರವೆಂಬ ಮುಖ ಸುರೂಪವೆಂಬ ಪದಾರ್ಥ ಪ್ರಸನ್ನ ಪ್ರಸಾದಸ್ವರೂಪಿನಿಂದ ನೆಲೆಗೊಂಡಿಪ್ಪುದೆಂಬುದೀಗ–'ಬ'.

'ಸ' ಎಂಬ ಪ್ರಣಮದಲ್ಲಿ ವಿಗ್ರಹಾರ್ಥವೇನಯ್ಯಾ ಎಂಬಲ್ಲಿ ತಂಗಟೂರು ಮಾರಣ್ಣಗಳೋಪಾದಿಯಲ್ಲಿ ಪ್ರಾಣಲಿಂಗಿಸ್ಥಲವುಳ್ಳವರುಗಳ ಅನಾಹುತ ಚಕ್ರದ ಹನ್ನೆರಡೆಸಳ ಕಂಜದ ಮಧ್ಯದಲ್ಲಿ ಪ್ರಾಣಲಿಂಗಿಯೆಂಬ ಅಂಗ ಜಂಗಮವೆಂಬ ಲಿಂಗ ಆದಿಯೆಂಬ ಶಕ್ತಿ ಅನುಭಾವನೆಂಬ ಭಕ್ತಿ ಸುಮಾನನೆಂಬ ಹಸ್ತತ್ವಕ್ಕೆಂಬ ಮುಖ ಸುಸ್ಪರ್ಶನವೆಂಬ ಪದಾರ್ಥ ಪ್ರಸನ್ನ ಪ್ರದಸ್ವರೂಪಿನಿಂದ ನೆಲೆಗೊಂಡಿಪ್ಪುದೆಂಬುದೀಗ–'ಸ'.

'ವ' ಎಂಬ ಪ್ರಣಮದಲ್ಲಿ ವಿಗ್ರಹಾರ್ಥವೇನಯ್ಯಾ ಎಂಬಲ್ಲಿ ಊರಿಲಿಂಗಯ್ಯ ಗಳೋಪಾದಿಯಲ್ಲಿ ಶರಣಸ್ಥಲವುಳ್ಳವರುಗಳ ವಿಶುದ್ಧಿ ಚಕ್ರದ ಹದಿನಾರೆಸಳ ಕಂಜದ ಮಧ್ಯದಲ್ಲಿ ಶರಣನೆಂಬ ಅಂಗ ಪ್ರಸಾದವೆಂಬ ಲಿಂಗ ಪರಾ ಎಂಬ ಶಕ್ತಿ ಆನಂದ ವೆಂಬ ಭಕ್ತಿ ಸುಜ್ಞಾನವೆಂಬ ಹಸ್ತ ಶ್ರವಣೇಂದ್ರಿಯವೆಂಬ ಮುಖ ಸುಶಬ್ಧವೆಂಬ ಪದಾರ್ಥ ಪ್ರಸನ್ನ ಸಾದಾಸ್ವರೂಪಿನಿಂದ ನೆಲೆಗೊಂಡಿಪ್ಪು ದೆಂಬುದೀಗ–'ವ'.

'ಲಿಂಗ' ವೆಂಬ ಪ್ರಣಮದಲ್ಲಿ ವಿಗ್ರಹಾರ್ಥವೇನಯ್ಯಾ ಎಂಬಲ್ಲಿ ಅಜಗಣಯ್ಯಗಳೋಪಾದಿಯಲ್ಲಿ ಐಕ್ಯಸ್ಥಲವುಳ್ಳವರುಗಳ ಆಜ್ಞಾಚಕ್ರದ ಎರಡೆಸಳ ಕಂಜದ ಮಧ್ಯದಲ್ಲಿ ಐಕ್ಯನೆಂಬ ಅಂಗ ಮಹಾ ಎಂಬ ಲಿಂಗ ಚಿತ್ತೆಂಬ ಶಕ್ತಿ ಸಮರಸವೆಂಬ ಭಕ್ತಿ ಸದ್ಭಾವವೆಂಬ ಹಸ್ತ ಹೃದಯವೆಂಬ ಮುಖ ಸುತೃಪ್ತಿಯೆಂಬ ಪದಾರ್ಥ ಪ್ರಸನ್ನ ಪ್ರಸಾದ ಸ್ವರೂಪಿನಿಂದ ನೆಲೆಗೊಂಡಿಪ್ಪುದೆಂಬುದೀಗ – ಲಿಂಗ ಇತು ಷಟ್ಸ್ಥಲಬ್ರಹ್ಮಿಗಳ ಷಡಾಧಾರ ಚಕ್ರದ ಕಂಜದಲಿರ್ದ ಅಷ್ಟವಿದ ಸಕೀಲಂಗಳಿಂದ ನೆಲೆಗೊಂಡಿಪ್ಪ ಚಿದ್ದನಲಿಂಗಕ್ಕೋಸ್ಕರ ನಮಸ್ಕಾರವು ಮತ್ತೆ ಶ್ರೀ ಜ್ಞಾನೇಶ್ವರ್ಯವನುಳಂಧಗುರುಃ ಮುಕ್ತಿಪ್ರದಾಯಕನಾದಂಥ ಬಸವ ಸತ್ಯಜ್ಞಾನಾನಂತಬ್ರಹ್ಮ ಸ್ವರೂಪವಾದ ಲಿಂಗ ಉತ್ಪತ್ತಿ ಸ್ಥಿತಿ ಪ್ರಳಯಕ್ಕಾಧಾರವಾದ ಪರಮದೇಮೆಶಗೋಸ್ಕರ ನಮಸ್ಕಾರವು?

ಕರಣಹಸಿಗೆ:– ಕರಣಹಸಿಗೆ ಎಂಬ ಪೂರ್ವಪ್ರಕರಣವು ಈ ಶಾಸ್ತ್ರಕ್ಕೆ ತತ್ವಂಗಳ ಸಂಗ್ರಹದ ವಿಭಾಗದ ವಿವರಣೆಯೆಂಬ ನಾಮವು ಏನು ಕಾರಣ ಇದಕ್ಕೆ ಬಂದಿತೆಲೆ ಸ್ವಾಮಿ ಎಂದು ಬೆಸಗೊಂಡಡೆ

ಕರಣವೆಂದಡೆ – ತತ್ತ್ವಂಗಳು ಹಸಿಗೆಯೆಂದಡೆ ವಿಭಾಗವು ಅದು ಹೇಗೆಂದಡೆ ಒಬ್ಬಾನೊಬ್ಬ ಹಲಾಯುಧನು ಮಳೆಯ ಹದದಿ ಭೂಮಿಯ ಬೆದೆಯನರಿದು ಎತ್ತು ಕುಂಟೆ

